೨೬

# ಹನರೂ ಚೀನರೂ

ಏಪ್ರಿಲ್ ೪, ೧೯೩೨

ಕಳೆದ ವರ್ಷ ನೈನಿ ಸೆರೆಮನೆಯಿಂದ ಬರೆದ ಕಾಗದಗಳಲ್ಲಿ ಚೀನಾದ ಪ್ರಾಚೀನ ಕಾಲದ ಕತೆಯನ್ನು, ಹೊಯಾಂಗ್‌ಹೋ ನದೀತೀರದ ವಸಾಹತುಗಳ, ಹ್ಸಿಯಾ, ಷಂಗ್ ಅಥವಾ ಇನ್ ಮತ್ತು ಚೌ ಮುಂತಾದ ಪ್ರಾಚೀನ ರಾಜಮನೆತನಗಳ ವಿಷಯವನ್ನು ಬರೆದೆ. ಚೀನಾದ ರಾಜ್ಯಗಳು ಕ್ರಮವಾಗಿ ಹೇಗೆ ಬೆಳೆದುವು, ಈ ಮಹಾಯುಗಗಳಲ್ಲಿ ಕೇಂದ್ರಪ್ರಭುತ್ವವೆಂದು ಹೇಗೆ ರೂಪುಗೊಂಡಿತು ಎಂಬುದನ್ನೂ ಬರೆದೆ. ಅನಂತರ ದೀರ್ಘಕಾಲ ಚೌ ವಂಶ ಹೆಸರಿಗೆ ನಡೆದು ಬಂತು. ಆಗ ಕೇಂದ್ರದಲ್ಲಿ ಪ್ರಭುತ್ವ ಬಲಗೊಳ್ಳುತ್ತಿದ್ದುದು ನಿಂತು ಹೋಯಿತು; ಅವ್ಯವಸ್ಥೆಗೆ ಮೊದಲಾಯಿತು. ಚಿಕ್ಕಪುಟ್ಟ ಆಡಳಿತಗಾರರೆಲ್ಲ ಅರಸರಾಗಿ ಹೋದರು. ಅರಸರೆಲ್ಲ ಸ್ವತಂತ್ರರಾದರು; ಪರಸ್ಪರ ಜಗಳಕ್ಕಾರಂಭಿಸಿದರು. ಈ ದೌರ್ಭಾಗ್ಯ ಸ್ಥಿತಿಯಲ್ಲಿ ನೂರಾರು ವರ್ಷ ಕಳೆಯಿತು! ಕಟ್ಟಕಡೆಗೆ ಅರಸರಲ್ಲೊಬ್ಬ—ಚಿನ ಒಡೆಯ—ಪ್ರಾಚೀನ, ಬಲಹೀನ ಚೌ ರಾಜಮನೆತನವನ್ನು ಓಡಿಸಿದ. ಅವನ ಮನೆತನದವರೆ ಚಿನ ವಂಶೀಯರು. ಈ ರಾಜವಂಶದ ಹೆಸರೇ ಚೀನಾದೇಶಕ್ಕೂ ಬಂತು.

ಚೀನಾದಲ್ಲಿ ಚಿನರ ಪಾರುಪತ್ಯ ಮೊದಲಾದದ್ದು ಕ್ರಿಸ್ತಪೂರ್ವ ೨೫೫ರಲ್ಲಿ. ಇದಕ್ಕೆ ಹದಿಮೂರು ವರ್ಷ ಮೊದಲೇ ಭಾರತದಲ್ಲಿ ಅಶೋಕ ರಾಜ್ಯಭಾರ ಮಾಡಲಾರಂಭಿಸಿದ್ದ. ಚೀನಾದಲ್ಲಿ ಅಶೋಕನ ಸಮಕಾಲೀನರ ವಿಚಾರ ನೋಡುತ್ತಿದ್ದೇವೆ. ಚಿನ ವಂಶದ ಮೊದಲ ಮೂವರು ಚಕ್ರವರ್ತಿಗಳೂ ಅಲ್ಪಕಾಲ ಆಳಿದರು. ಕ್ರಿ. ಪೂ. ೨೪೬ರಲ್ಲಿ ನಾಲ್ಕನೆಯವ ಸಿಂಹಾಸನಕ್ಕೆ ಬಂದ. ಇವನು ಅಸಾಧಾರಣ ವ್ಯಕ್ತಿ. ವಂಗ್ ಚಂಗ್ ಎಂದು ಅವನ ಹೆಸರು. ಅನಂತರ ಷಿಹ್ ಹುವಾಂಗ್ ತಿ ಎಂಬ ಹೆಸರನ್ನಿಟ್ಟುಕೊಂಡ. ಈ ಹೆಸರೇ ಹೆಚ್ಚು ಬಳಕೆಗೆ ಬಂದದ್ದು. 'ಪ್ರಥಮ ಸಮ್ರಾಟ್' ಎಂದು ಅದಕ್ಕರ್ಥ. ತಾನು ಮಹಾಪುರುಷ, ತನ್ನ ಕಾಲ ಮಹಾಯುಗ ಎಂದು ಈ ಪ್ರಥಮ ಸಮ್ರಾಟನ ಭಾವನೆ. ಪ್ರಾಚೀನಕಾಲ ಎಂದರೆ ಅವನಿಗೆ ಕೊಂಚವೂ ಗೌರವವಿರಲಿಲ್ಲ. 'ಹಿಂದಿನ ಕಾಲವನ್ನೆಲ್ಲ ಮರೆತು ಬಿಡಿ. ನಮ್ಮಿಂದ ಮೊದಲಾಯಿತು ಚರಿತ್ರೆ ಎಂದು ಭಾವಿಸಿ' ಎಂದು ತನ್ನ ಪ್ರಜೆಗಳಿಗೆಲ್ಲ ಹೇಳಿದ ಈ ಮಹಾ ಚಕ್ರವರ್ತಿ! ೨,೦೦೦ ವರ್ಷದಿಂದಲೂ ಕ್ರಮವಾಗಿ ಚಕ್ರವರ್ತಿಗಳಿದ್ದರೆಂಬುದು ಅವನ ಗಣನೆಗೇ ಬರಲಿಲ್ಲ. ದೇಶದಲ್ಲಿ ಅವರ ನೆನಪು ಕೂಡ ಇಲ್ಲದಂತೆ ಮಾಡಿದ. ಹಳೆಯ ಚಕ್ರವರ್ತಿಗಳು ಮಾತ್ರವಲ್ಲ,

ಹಿಂದಿನ ಕಾಲದ ಮಹಾಮಹಿಮರ ಹೆಸರು ಸಹ ನಿರ್ನಾಮವಾದವು. ಹಿಂದಿನ ಕಾಲದ ಪುಸ್ತಕಗಳನ್ನೆಲ್ಲ, ಕನ್‌ಪ್ಯೂಷಿಯಸ್‌ ಮತದ ಮಹಾಗ್ರಂಥಗಳನ್ನೆಲ್ಲ ಸುಡಬೇಕೆಂದು, ಧ್ವಂಸಮಾಡಬೇಕೆಂದು ಆಜ್ಞೆಯಾಯಿತು! ವೈದ್ಯ, ವಿಜ್ಞಾನ ಗ್ರಂಥಗಳು ಮಾತ್ರ ಉಳಿದವು.

"ಯಾರು ಪ್ರಾಚೀನ ವಸ್ತುವಿಚಾರಗಳ ಉಪಯೋಗಮಾಡುವರೋ, ಆಧುನಿಕ ಕಾಲವನ್ನು ಯಾರು ಹಿಯ್ಯಾಳಿಸುವರೋ ಅವರನ್ನೂ, ಅವರ ಬಂಧುಗಳನ್ನೂ ಮರಣದಂಡನೆಗೆ ಗುರಿಮಾಡಲಾಗುತ್ತದೆ" ಹೀಗೆಂದು ಶಾಸನ ಮಾಡಿದ!

ಶಾಸನ ಮಾಡಿದ್ದು ಮಾತ್ರವಲ್ಲ, ಅದರಂತೆಯೇ ಆಚರಿಸಿದ. ನೂರಾರು ಮಂದಿ ವಿದ್ವಾಂಸರು ತಾವು ಮೆಚ್ಚಿದ ಗ್ರಂಥಗಳನ್ನು ಬಚ್ಚಿಟ್ಟರು; ಅದಕ್ಕಾಗಿ ಅವರನ್ನು ಸಜೀವವಾಗಿ ಹೂತರಂತೆ. ಒಳ್ಳೆತನದಲ್ಲಿ, ಕೃಪೆಯಲ್ಲಿ, ವಿಶ್ವಾಸದಲ್ಲಿ ಮೊದಲನೆ ಚಕ್ರವರ್ತಿಯನ್ನು ಬಿಟ್ಟರೆ ಇನ್ನಿಲ್ಲ! ಭಾರತವನ್ನು ಕುರಿತು ವಿಪರೀತ ಶ್ಲಾಘನೆ ಕೇಳಿದಾಗಲೆಲ್ಲ ನನಗೆ ಈ ಚಕ್ರವರ್ತಿಯು ನೆನಪಾಗುತ್ತದೆ; ಕೊಂಚ ಸಹಾನುಭೂತಿಯೂ ಉಂಟಾಗುತ್ತದೆ. ನಮ್ಮಲ್ಲಿ ಕೆಲವರು ಹಿಂದಿನ ಕಾಲದ ಕಡೆಯೇ ನೋಡುತ್ತಿರುತ್ತಾರೆ; ಯಾವಾಗಲೂ ಅದನ್ನೇ ಹೊಗಳುತ್ತಾರೆ; ಸದಾ ಅದರಿಂದಲೇ ಸ್ಫೂರ್ತಿಯನ್ನು ನಿರೀಕ್ಷಿಸುತ್ತಾರೆ. ಪ್ರಾಚೀನಕಾಲವು ಮಹತ್ಕಾರ್ಯ ಸಾಧನೆಗೆ ಸ್ಫೂರ್ತಿ ಕೊಡುವುದಾದರೆ ಸಂತೋಷ; ಆ ಸ್ಫೂರ್ತಿಯನ್ನು ಪಡೆಯೋಣ. ಆದರೆ ಯಾವಾಗಲೂ ಹಿಂದಕ್ಕೆ ತಿರುಗಿ ನೋಡುತ್ತಿರುವುದು ಯಾವ ವ್ಯಕ್ತಿಗೂ ಹಿತಕಾರಿಯಲ್ಲ, ಯಾವ ಜನಾಂಗದ ಆರೋಗ್ಯಕ್ಕೂ ಒಳಿತಲ್ಲ. ಮನುಷ್ಯನು ಹಿಂದೆ ಹಿಂದಕ್ಕೇ ಹೋಗುವುದು ವಿಧಿಯಾಗಿದ್ದರೆ, ಸದಾ ಹಿಂದಿನ ಕಾಲವನ್ನೇ ನೋಡುತ್ತಿರಬೇಕೆಂಬುದಾದರೆ ಅವನ ತಲೆಯ ಹಿಂದುಗಡೆ ಇರಬೇಕಾಗಿತ್ತು ಕಣ್ಣು. ಹಿಂದಿನ ಕಾಲ ಕುರಿತು ಓದೋಣ; ಅದರಲ್ಲಿ ಶ್ಲಾಘನೀಯವಾದುದನ್ನೆಲ್ಲ ಶ್ಲಾಘಿಸೋಣ; ಆದರೆ ನಮ್ಮ ಕಣ್ಣು ಮಾತ್ರ ಯಾವಾಗಲೂ ಮುಂದೆ ನೋಡುತ್ತಿರಬೇಕು; ನಮ್ಮ ಹೆಜ್ಜೆ ಮುಂದು ಮುಂದಕ್ಕೆ ಹೋಗುತ್ತಿರಬೇಕು.

ಹಳೆಯ ಗ್ರಂಥಗಳನ್ನೂ, ಆ ಗ್ರಂಥಗಳನ್ನು ಓದುವವರನ್ನು ಕೊಲ್ಲುತ್ತಿದ್ದ, ಸುಡುತ್ತಿದ್ದ ಷಿಹ್ ಹುವಾಂಗ್ ತಿ ಯು ಕ್ರೂರಿ, ಅನಾಗರಿಕ. ಅವನೊಂದಿಗೇ ಅವನು ಮಾಡಿದ್ದೆಲ್ಲ ಹೋಯಿತು. ಅವನು ಮೊದಲನೆ ಚಕ್ರವರ್ತಿ, ಅವನ ಅನಂತರ ಎರಡನೆಯವ ಬಂದ, ಮೂರನೆಯವನಾಯಿತು; ಹೀಗೆ ಆಚಂದ್ರಾರ್ಕವೂ ನಡೆಯುತ್ತ ಹೋಗಬೇಕೆಂಬುದವನ ಆಶೆ. ಇಷ್ಟಾದರೂ ಚೀನಾದ ರಾಜಮನೆತನಗಳಲ್ಲೆಲ್ಲ ಚಿನ್ ಮನೆತನವೆ ಅತ್ಯಲ್ಪಕಾಲ ಬಾಳಿದ್ದು. ಅನೇಕ ರಾಜವಂಶಜರು ನೂರಾರು ವರ್ಷಕಾಲ ರಾಜ್ಯವಾಳಿದರು. ಚಿನ್ ಮನೆತನಕ್ಕೆ ಮೊದಲು ಸಿಂಹಾಸನಕ್ಕೆ ಬಂದವರು ೮೬೭ ವರ್ಷ ಆಳಿದರು. ಚೌ ಮಹಾವಂಶೀಯರು

ಹುಟ್ಟಿದರು, ಜಯಶೀಲರೆನಿಸಿದರು ; ಬಲಯುತವಾದ ಸಾಮ್ರಾಜ್ಯಸೂತ್ರಗಳನ್ನು ಹಿಡಿದರು. ಆ ಸಾಮ್ರಾಜ್ಯ ಕ್ಷೀಣವಾಗಿ ಮಣ್ಣುಗೂಡಿತು. ಇಷ್ಟೆಲ್ಲ ಕೇವಲ ೫೦ ವರ್ಷಗಳಲ್ಲಿ ಆಗಿಹೋಯಿತು. ಷಿಹ್ ಹುವಾಂಗ್ ತಿಯು ಮಹಾರಾಜ ವಂಶದ ಪ್ರಥಮ ಸಮ್ರಾಟ; ಅವನ ಅನಂತರ ಅನೇಕರು ಆ ಪಟ್ಟಕ್ಕೆ ಬರ ಬೇಕಾಗಿತ್ತು. ಆದರೂ ತಿ ಕಾಲವಾದ (ಕ್ರಿಸ್ತಪೂರ್ವ ೨೦೯) ಮೂರು ವರ್ಷ ದೊಳಗೆ ಈ ವಂಶವೇ ಕೊನೆಗಂಡಿತು ಆದಾಯಿತೊ ಇಲ್ಲವೊ ಹೂತುಹೋಗಿದ್ದ ಕನ್‌ಫ್ಯೂಷಿಯಸ್ ಮಹಾ ಗ್ರಂಥಗಳೆಲ್ಲ ಹೊರಕ್ಕೆ ಬಂದವು. ಹಿಂದೆ ತಮಗಿದ್ದ ಸ್ಥಾನವನ್ನು ಮತ್ತೆ ಆಕ್ರಮಿಸಿದವು.

ಚೀನಾವನ್ನಾಳಿದ ಪ್ರಭುಗಳಲ್ಲಿ ಷಿಹ್ ಹುವಂಗ್ ತಿ ಯೊಬ್ಬ ಮಹಾ ಬಲಶಾಲಿ. ನೂರಾರು ಪುಟ್ಟಪುಟ್ಟ ಪಾಳೆಯಗಾರರನ್ನು ಮೂಲೆಗೆ ಕೂಡಿಸಿದ. ಶ್ರೀಮಂತರ ನಾಯಕತನವನ್ನು ಕೊನೆಗಾಣಿಸಿದ. ಕೇಂದ್ರದಲ್ಲಿ ಪ್ರಬಲವಾದ ಸರಕಾರವನ್ನು ಸ್ಥಾಪಿಸಿದ. ಇಡೀ ಚೀನಾ ಗೆದ್ದ ; ಅನ್ನಾಮನ್ನು ಆಕ್ರಮಿಸಿದ. ಚೀನಾದ ಮಹಾಗೋಡೆಯನ್ನು ಕಟ್ಟಲು ಆರಂಭಿಸಿದ ಚಕ್ರವರ್ತಿ ಈತನೆ. ಇದು ಅಪಾರ ವಾದ ವೆಚ್ಚದ ಕೆಲಸ. ಪರದೇಶಿ ಶತ್ರುಗಳಿಂದ ಸಂರಕ್ಷಿಸಿಕೊಳ್ಳಲು ಇದಕ್ಕಾಗಿ ಎಷ್ಟೇ ವೆಚ್ಚವಾಗಲಿ ಚೀನೀಜನ ಸಿದ್ಧರಾಗಿದ್ದರು ; ದೊಡ್ಡ ಸೈನ್ಯವೊಂದನ್ನು ಸದಾ ಸಿದ್ಧವಾಗಿರಿಸಿದ್ದರು. ಶತ್ರುಗಳ ಮುತ್ತಿಗೆಯನ್ನು ಒಂದು ಗೋಡೆ ತಡೆ ದೀತೆ? ಸಣ್ಣಪುಟ್ಟ ಆಕ್ರಮಣ ಪ್ರಯತ್ನವನ್ನು ತಡೆಯಬಹುದು. ಇದರಿಂದ ಚೀನೀಜನ ಶಾಂತಪ್ರಿಯರೆಂಬುದು ವ್ಯಕ್ತವಾಗುತ್ತದೆ. ಬಲಶಾಲಿಗಳಾದರೂ ಕ್ಷಾತ್ರಕೀರ್ತಿಯನ್ನವರು ಬಯಸಲಿಲ್ಲ.

ಮೊದಲನೆ ಚಕ್ರವರ್ತಿ ಷಿಹ್ ಹುವಾಂಗ್ ತಿ ಸತ್ತ. ಅವನಂಥವ ಆ ವಂಶ ದಲ್ಲಿ ಮತ್ತೊಬ್ಬ ಹುಟ್ಟಲಿಲ್ಲ. ಆದರೂ ಅವನ ಕಾಲದಿಂದ ಚೀನಾ ಎಲ್ಲ ಒಂದೆಂಬ ಪರಂಪರಾಭಾವ ಮೊದಲಾಯಿತು.

ತರುವಾಯ ಹಸ್ ರಾಜವಂಶ. ಅದು ೪೦೦ ವರ್ಷಗಳ ಕಾಲ ಬಾಳಿತು. ಆ ರಾಜಕುಲದಲ್ಲಿ ಒಬ್ಬ ಚಕ್ರವರ್ತಿನಿಯೂ ಇದ್ದಳು. ಈ ವಂಶದ ಆರನೆಯ ಅರಸ ವು-ತಿ ಮಹಾಪ್ರಭುವೆನಿಸಿದ ; ಮಹಾಬಲಶಾಲಿಯೆನಿಸಿದ. ೫೦ ವರ್ಷಕ್ಕೆ ಮೇಲೆ ಪ್ರಭುತ್ವಮಾಡಿದ. ಉತ್ತರದ ಕಡೆಯಿಂದ ಬಂದು, ಮುತ್ತಿ ಸದಾ ಹಿಂಸೆಕೊಡುತ್ತಿದ್ದ ಟಾರ್ಟರರನ್ನು ಮಟ್ಟಹಾಕಿದ. ಮೂಡಲಲ್ಲಿ ಕೋರಿಯ ದಿಂದ ಪಡುವಲಲ್ಲಿ ಕ್ಯಾಸ್ಪಿಯನ್ ಕಡಲವರೆಗೆ ಚೀನಾದ ಸಮ್ರಾಟನನ್ನೆದುರಿಸಿ ದವರೇ ಇಲ್ಲ. ಮಧ್ಯ ಆಸಿಯದ ನಾನಾಕುಲಜರು ಇವನನ್ನು ಮಹಾಪ್ರಭು ವೆಂದು ಅಂಗೀಕರಿಸಿದರು. ಆಸಿಯಾ ನಕ್ಷೆಯ ಕಡೆ ನೋಡು ; ಕ್ರಿಸ್ತಶಕದ ಒಂದು, ಎರಡನೆ ಶತಮಾನದಲ್ಲಿ ಚೀನಾದ ಪ್ರಭಾವವೆಷ್ಟು ವ್ಯಾಪಿಸಿತ್ತೊ, ಆದರ

ಬಲವೆಷ್ಟು ಗಣನಾರ್ಹವಾಗಿತ್ತೋ ಗೊತ್ತಾಗುತ್ತದೆ. ಈ ಕಾಲದಲ್ಲಿ ರೋಮಿನ ಕೀರ್ತಿ ಪುರಾಣವನ್ನೆಷ್ಟೋ ಓದಿದೇವೆ. ರೋಮಿನ ಕೀರ್ತಿ ಜಗತ್ತನ್ನೆಲ್ಲ ಆವರಿಸಿತ್ತೆಂಬ ಭ್ರಾಂತಿಗೊಳಗಾಗುವ ಸಂಭವವೂ ಇದೆ. 'ವಿಶ್ವಮೋಹಿನಿ' ಯಲ್ಲವೆ ರೋಂ! ಆಗ ರೋಂ ಬಲಗೊಳ್ಳುತ್ತಲಿತ್ತು, ಮಹಾ ಪದವಿಗೇರಿತ್ತು; ಆದರೂ ಚೀನಾ ಮಹಾ ವಿಸ್ತಾರವೂ ಬಲಯುತವೂ ಆದ ಸಾಮ್ರಾಜ್ಯ.

ಪ್ರ-ತಿ ಕಾಲದಲ್ಲೇ ಇರಬೇಕು ಚೀನಾಕ್ಕೂ ರೋಮಿಗೂ ಬಾಂಧವ್ಯವುಂಟಾದದ್ದು. ಪರ್ಷಿಯ, ಮೆಸೊಪೊಟೇಮಿಯವೆಂದು ಈಗ ಕರೆಯುವ ಭೂಭಾಗದಲ್ಲಿ ಪಾರ್ಥಿಯನ್ ಜನರಿದ್ದರು. ಅವರ ಚೀನಾಕ್ಕೂ ರೋಮಿಗೂ ವ್ಯಾಪಾರ ಸಂಬಂಧವನ್ನು ಕಲ್ಪಿಸಿದರು. ರೋಮಿಗೂ ಪಾರ್ಥಿಯಕ್ಕೂ ಯುದ್ಧ ವೊದಲಾಯಿತು; ಈ ವ್ಯಾಪಾರಕ್ಕೆ ಅಡ್ಡಿ ಬಂತು. ಆಗ ರೋಂ ಸಮುದ್ರಮುಖವಾಗಿ, ನೇರವಾಗಿ ತಾನೇ ವ್ಯಾಪಾರಮಾಡತೊಡಗಿತು. ರೋಮಿನ ಜಹಜು ನಿಜವಾಗಿ ಚೀನಾಕ್ಕೆ ಬಂತು. ಇದು ನಡೆದದ್ದು ಕ್ರಿಸ್ತಶಕ ಎರಡನೆ ಶತಮಾನದ ತರುವಾಯ. ನಮ್ಮ ಕಥೆಯಿನ್ನೂ ಕ್ರಿಸ್ತಪೂರ್ವದಲ್ಲೇ ಇದೆ.

ಹರ್‌ರಾಜವಂಶದ ಕಾಲದಲ್ಲಿ ಚೀನಾಕ್ಕೆ ಬುದ್ಧಧರ್ಮ ಬಂತು. ಕ್ರಿಸ್ತಶಕಾರಂಭಕ್ಕೆ ಮೊದಲೇ ಚೀನಾದಲ್ಲಿ ಬುದ್ಧಧರ್ಮದ ಹೆಸರು ಕೇಳಿಬರುತ್ತಿತ್ತು. ಆದರೆ ಒಂದು ದಿನ ಚಕ್ರವರ್ತಿಗೆ ಕನಸಾಯಿತು; ಕನಸಿನಲ್ಲಿ ೧೭ ಅಡಿ ಎತ್ತರದ ಮನುಷ್ಯನೊಬ್ಬ ಚಕ್ರವರ್ತಿಯ ಕಣ್ಣಿಗೆ ಬಿದ್ದ; ಆ ವ್ಯಕ್ತಿಯ ತಲೆಯ ಸುತ್ತಲೂ ಮಹಾಪ್ರಭೆಯೊಂದು ಕಾಣುತ್ತಿತ್ತು. ಈ ದೃಶ್ಯವನ್ನು ಅವನು ಕಂಡದ್ದು ಪಡುವಲಲ್ಲಿ; ಆ ದಿಕ್ಕಿಗೆ ತನ್ನವರನ್ನು ಕಳಿಸಿದ. ಅವರು ಬುದ್ಧನ ಮೂರ್ತಿ, ಬೌದ್ಧಧರ್ಮ ಗ್ರಂಥಗಳನ್ನು ಹೊತ್ತುಕೊಂಡು ಬಂದರು. ಬೌದ್ಧಧರ್ಮದೊಂದಿಗೆ ಭಾರತದಿಂದ ಚೀನಾಕ್ಕೆ ಭಾರತದ ಕಲೆ ಬಂತು. ಈ ಕಲೆ ಕೋರಿಯಕ್ಕೆ ಹರಡಿತು; ಅಲ್ಲಿಂದ ಜಪಾನಿಗೆ ಹೋಯಿತು.

ಹರ್ ಕಾಲದ ಎರಡು ಮುಖ್ಯ ವಿಷಯ ಗಮನಾರ್ಹವಾಗಿವೆ. ಮರದಲ್ಲಿ ಅಕ್ಷರ ಕೊರೆದು ಅಚ್ಚುಮಾಡುವ ಕಲೆಯನ್ನು ಕಂಡುಹಿಡಿದರು. ಆದರೆ ೧,೦೦೦ ವರ್ಷಗಳವರೆಗೆ ಅದನ್ನು ಹೆಚ್ಚಾಗಿ ಉಪಯೋಗಿಸಲಿಲ್ಲ. ಇಷ್ಟಾದರೂ ಚೀನಾ ಯೂರೋಪಿಗಿಂತ ೫೦೦ ವರ್ಷ ಮುಂದೆ ಸಾಗಿತ್ತು.

ಸಾರ್ವಜನಿಕ ಅಧಿಕಾರಿಗಳನ್ನಾರಿಸಲು ಪರೀಕ್ಷೆ ನಡೆಸುವ ಪದ್ಧತಿಯನ್ನು ಆರಂಭಿಸಿದ್ದು ಮತ್ತೊಂದು ಅಂಶ. ಬಾಲಕ ಬಾಲಕಿಯರಿಗೆ ಪರೀಕ್ಷೆಯೆಂದರಾಗದು; ನಾ ಬಲ್ಲೆ. ಆದಕ್ಕಾಗಿ ಅವರ ವಿಚಾರದಲ್ಲಿ ನನಗೆ ಬಹಳ ಸಹಾನುಭೂತಿ ಇದೆ. ಆದರೆ ಆ ಕಾಲದಲ್ಲಿ ಚೀನಾದಲ್ಲಿ ಅಧಿಕಾರಿಗಳನ್ನು ನೇಮಿಸಲು ಪರೀಕ್ಷೆಗಳನ್ನು ನಡೆಸುತ್ತಿದ್ದುದು ಅತ್ಯಪೂರ್ವವಾದ ವಿಚಾರ.

ಇತರ ದೇಶಗಳಲ್ಲಿ ನಿನ್ನೆ ಮೊನ್ನೆಯವರೆಗೆ ತಮತಮಗೆ ಬೇಕಾದವರಿಗೆ ಅಧಿಕಾರ ಕೊಡುತ್ತಿದ್ದರು; ಇಲ್ಲವೆ ತಮ್ಮ ಜಾತಿಮತದವರೆಂದು ಕೆಲಸಗಳನ್ನು ಕೊಡುತ್ತಿದ್ದರು. ಆದರೆ ಆ ಕಾಲದಲ್ಲಿ ಚೀನರು ಪರೀಕ್ಷೆ ನಡಿಸಿ, ಉತ್ತೀರ್ಣರಾದವರಿಗೆ ಕೆಲಸ ಕೊಡುತ್ತಿದ್ದುದು ದೊಡ್ಡ ಮಹತ್ವದ ವಿಚಾರ. ಚೀನಾದಲ್ಲಿ ಪರೀಕ್ಷೆ ಪಾಸಾದವರು ಯಾರೇ ಆಗಲಿ ಅಧಿಕಾರಕ್ಕೆ ಬರಬಹುದಾಗಿತ್ತು. ಇದೇನಂತಹ ಆದರ್ಶವಿಧಾನವಲ್ಲ. ಕನ್‌ಫ್ಯೂಷಿಯಸ್ ಧರ್ಮದ ವಿಚಾರದಲ್ಲಿ ಪರೀಕ್ಷೆಕೊಟ್ಟ ಮಾತ್ರಕ್ಕೆ ಆವನು ಯಶಸ್ವಿಯಾದ ಅಧಿಕಾರಿಯಾದಾನೆಂದು ಹೇಳಲಾದೀತೆ? ಆವರವರಿಗೆ ಬೇಕಾದವರಿಗೆ ಅಧಿಕಾರಕೊಡುವ ಪದ್ಧತಿಗಿಂತ ಪರೀಕ್ಷಾಪದ್ಧತಿ ಮೇಲು; ಸಂದೇಹವಿಲ್ಲ. ೨,೦೦೦ ವರ್ಷಗಳ ಕಾಲ ನಡೆಯಿತು ಹೀಗೆ ಚೀನಾದಲ್ಲಿ; ಮೊನ್ನೆ ಮೊನ್ನೆ ಆ ಪದ್ಧತಿಯನ್ನು ತೆಗೆದುಹಾಕಿದರು.

೨೭

# ರೋಮ್ ಕಾರ್ಥೇಜುಗಳ ಕಡಿದಾಟ

ಏಪ್ರಿಲ್ ೫, ೧೯೩೨

ಪೂರ್ವದ ಕೊನೆಯಿಂದ ಪಶ್ಚಿಮಕ್ಕೆ ಹೋಗೋಣ, ರೋಂ ಬೆಳವಣಿಗೆಯನ್ನು ಗುರುತಿಸೋಣ. ಕ್ರಿಸ್ತಪೂರ್ವ ಎಂಟನೆ ಶತಮಾನದಲ್ಲಿ ರೋಮ್ ಸ್ಥಾಪಿತವಾಯಿತೆಂದು ಹೇಳುತ್ತಾರೆ. ಪ್ರಾಚೀನ ರೋಮಕರು ಆರ್ಯಕುಲದವರಾಗಿರಬೇಕು. ಟೈಬರ್ ನದಿಯ ಬಳಿಯ ಏಳು ಗುಡ್ಡಗಳಮೇಲೆ ಆವರು ಕೆಲವು ವಸಾಹತುಗಳನ್ನು ನಿರ್ಮಿಸಿಕೊಂಡಿರಬೇಕು. ಈ ವಸಾಹತುಗಳೇ ಕಡೆಗೆ ಒಂದು ನಗರವಾಗಿರಬೇಕು. ಈ ಪೌರರಾಜ್ಯವು ಕ್ರಮವಾಗಿ ಬೆಳೆಯುತ್ತ, ಇಟಲಿಯನ್ನೆಲ್ಲ ವ್ಯಾಪಿಸಿತು; ಕಟ್ಟಕಡೆಗೆ ಸಿಸಿಲಿಗೆ ಅಭಿಮುಖವಾದ ದಕ್ಷಿಣಾಗ್ರವಾದ ಮೆಸ್ಸಿನಾವನ್ನು ಮುಟ್ಟಿತು. city · State

ಗ್ರೀಸಿನ ಪೌರರಾಷ್ಟ್ರಗಳನ್ನು ನೀನು ಮರೆತಿರಲಾರೆ. ತಾವು ಹೋದ ಕಡೆಗೆಲ್ಲ ಗ್ರೀಕರು ಪೌರರಾಷ್ಟ್ರದ ಕಲ್ಪನೆಯನ್ನು ಒಯ್ದರು. ಮೆಡಿಟರೇನಿಯನ್ ತೀರದಲ್ಲೆಲ್ಲ ಗ್ರೀಕ್ ವಸಾಹತುಗಳೆ; ಪೌರರಾಷ್ಟ್ರಗಳೆ. ಈಗ ರೋಮಿನಲ್ಲಿ ನಾವು ನೋಡುವುದೇ ಬೇರೆ. ಮೊದಲು ಮೊದಲಲ್ಲಿ ರೋಮ್ ಬಹುಶಃ ಗ್ರೀಕ್ ಪೌರರಾಷ್ಟ್ರದಂತೆಯೇ ಇತ್ತು. ನೆರೆಹೊರೆ ಜನರನ್ನು ಕ್ರಮವಾಗಿ ಗೆದ್ದು ಬೆಳೆಯಿತು. ರೋಮ್ ರಾಷ್ಟ್ರವು ಹೀಗೆ ಬೆಳೆಯುತ್ತ ಇಟಲಿಯ ಬಹುಭಾಗವನ್ನು ವಶಪಡಿಸಿಕೊಂಡಿತು. ಇಷ್ಟು ವಿಸ್ತಾರವಾದ ರಾಜ್ಯ ಪೌರರಾಷ್ಟ್ರವಾಗಿರಲು ಸಾಧ್ಯವಿಲ್ಲ

ವಾಯಿತು; ರೋಮ್ ಆಳಲಾರಂಭಿಸಿತು. ರೋಮ್ ಸರಕಾರವಾದರೂ ಬಹಳ ವಿಚಿತ್ರವಾಗಿತ್ತು. ಅಲ್ಲಿ ಅರಸನಾಗಲಿ, ದೊಡ್ಡ ಚಕ್ರವರ್ತಿಯಾಗಲಿ ಇರಲಿಲ್ಲ. ಇಂದಿನಂತೆ ಪ್ರಜಾತಂತ್ರದ ಮಾದರಿಯ ಸರಕಾರವೂ ಇರಲಿಲ್ಲ. ಆದರೂ ಜಮೀನ್ದಾರರೂ, ಶ್ರೀಮಂತರೂ ಅದ ಮನೆತನದವರ ಪ್ರಾಬಲ್ಯದಿಂದ ಕೂಡಿದ ಒಂದು ಜಾತಿಯ ಪ್ರಜಾತಂತ್ರ ಪ್ರಭುತ್ವವೆನಿಸಿತು. 'ಸೆನೆಟ್' ಸರಕಾರ ಅದು. ಚುನಾಯಿತ 'ಕಾನ್ಸಲ್'ಗಳಿಬ್ಬರು ಈ 'ಸೆನೆಟ್'ಗೆ ಸದಸ್ಯರನ್ನು ನಾಮಕರಣಮಾಡುತ್ತಿದ್ದರು. ಬಹಳ ಕಾಲದವರೆಗೆ ಶ್ರೀಮಂತರು ಮಾತ್ರ 'ಸೆನೆಟರು'ಗಳಾಗಲು ಅವಕಾಶವಿತ್ತು. ರೋಮಕರಲ್ಲಿ ಎರಡು ಪಂಗಡಗಳು; 'ಪೆಟ್ರಿಷಿಯನ್ಸ್' ಎಂಬವರೆಲ್ಲ ಶ್ರೀಮಂತರು; ಸಾಮಾನ್ಯವಾಗಿ ಜಮೀನ್ದಾರರು ಸಾಮಾನ್ಯ ಜನರಿಗೆಲ್ಲ 'ಪ್ಲೆಬಿಯನ್ಸ್' ಎಂದು ಹೆಸರು. ರೋಮಕ 'ಸೆನೆಟ್' ಅಥವಾ 'ರಿಪಬ್ಲಿಕ್' ಚರಿತ್ರೆಯೆಂದರೆ ನೂರಾರು ವರ್ಷದ ಪೆಟ್ರಿಷಿಯನ್-ಪ್ಲೆಬಿಯನ್ ಹೊಡೆದಾಟ. ಪೆಟ್ರಿಷಿಯನ್‌ರೆ ಅಧಿಕಾರಬಲಯುತರು. ಬಲಕ್ಕೆ ಅಂಟಿಕೊಂಡೇ ಇರುತ್ತದೆ ಸಂಪತ್ತು. 'ಪ್ಲೆಬಿಯನ್ಸ್' ಕೀಳು ಮಾನವರು; ಅವರಿಗೆ ಅಧಿಕಾರ ಬಲವೂ ಇಲ್ಲ, ಹಣವೂ ಇಲ್ಲ. ಅಧಿಕಾರಬಲ ಸಂಪಾದನೆಗಾಗಿ, 'ಪ್ಲೆಬಿಯನ್'ರು ದೀರ್ಘ ಕಾಲ ಹೋರಾಡಿದರು; ಅವರಿಗೆ ಚೂರುಪಾರು ಸಿಕ್ಕರೆ ಹೆಚ್ಚು. ಇವರ ದೀರ್ಘ ಕಲಹದಲ್ಲಿ ಒಂದು ಕೌತುಕದ ಸಂಗತಿ; 'ಪ್ಲೆಬಿಯನ್'ರು ಒಂದು ಬಗೆಯ ಅಸಹಕಾರವನ್ನು ಪರಿಣಾಮಕಾರಿಯಾಗಿ ಹೂಡಿದರು. ಪ್ಲೆಬಿಯನ್‌ರೆಲ್ಲ ರೋಮ್‌ನಗರ ಬಿಟ್ಟು ಹೊರಟುಹೋಗಿ ಹೊಸ ನಗರ ಕಟ್ಟಿಕೊಂಡು ಅಲ್ಲಿ ನೆಲೆಸಿದರು. 'ಪೆಟ್ರಿಷಿಯನ್'ರಿಗೆ ಭಯ ಹುಟ್ಟಿತು; ಪ್ಲೆಬಿಯನ್‌ರನ್ನು ಬಿಟ್ಟು ಅವರು ಜೀವನ ನಡೆಸುವುದು ಕಷ್ಟವಾಯಿತು. ಆದಕಾರಣ ಪೆಟ್ರಿಷಿಯನ್ನರು ಪ್ಲೆಬಿಯನ್ನರೊಂದಿಗೆ ರಾಜಿಮಾಡಿಕೊಂಡರು; ಅಲ್ಪಸ್ವಲ್ಪ ಹಕ್ಕುಗಳನ್ನು ಕೊಟ್ಟರು. ಕ್ರಮವಾಗಿ ಪ್ಲೆಬಿಯನ್‌ರು ದೊಡ್ಡದೊಡ್ಡ ಅಧಿಕಾರ ಸ್ಥಾನಗಳಿಗೂ ಬಂದರು; 'ಸೆನೆಟ್' ಸದಸ್ಯರೂ ಆದರು.

ಪ್ಲೆಬಿಯನ್ - ಪೆಟ್ರಿಷಿಯನ್ ಕಲಹದ ಮಾತು ಬಂದು ಮತ್ತೆ ಯಾರೂ ಲೆಕ್ಕಕ್ಕೇ ಬರಲಿಲ್ಲವೆಂದು ಭಾವಿಸಬಾರದು. ಪ್ಲೆಬಿಯನ್, ಪೆಟ್ರಿಷಿಯನ್ ಇವೆರಡು ಪಂಗಡಗಳಲ್ಲದೆ ಅಸಂಖ್ಯಾತ ಗುಲಾಮರಿದ್ದರು ರೋಮಿನ ರಾಷ್ಟ್ರದಲ್ಲಿ. ಅವರಿಗೆ ಯಾವ ವಿಧವಾದ ಹಕ್ಕೂ ಇರಲಿಲ್ಲ. ಪೌರಪದವಿ ಕೂಡ ಅವರಿಗಿಲ್ಲ; ಅವರಿಗೆ ಓಟಿಲ್ಲ; ಅವರೆಲ್ಲ ತಮ್ಮ ತಮ್ಮ ಯಜಮಾನರ ಆಸ್ತಿ; ದನಕರು, ನಾಯಿಗಳಿರುವುದಿಲ್ಲವೆ. ಯಜಮಾನರ ಇಚ್ಛೆಯಂತೆ ಗುಲಾಮರನ್ನು ಮಾರಬಹುದು; ಮನಸ್ಸು ಬಂದಾಗೆಲ್ಲ ಶಿಕ್ಷೆ ವಿಧಿಸಬಹುದು. ಕೆಲವು ಷರತ್ತುಗಳ ಮೇಲೆ ಅವರನ್ನು ಬಿಡುಗಡೆಮಾಡುವುದೂ ಉಂಟು. ಹೀಗೆ ಬಿಡುಗಡೆಹೊಂದಿ

ದವರದೇ ಒಂದು ಪಂಗಡ; ಬಿಡುಗಡೆಯುವರೆಂದು ಅವರ ಹೆಸರು. ಹಿಂದಿನ ಕಾಲದಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಗುಲಾಮರಿಗೆ ಗಿರಾಕಿ ಬಹಳ; ಇದಕ್ಕಾಗಿ ಅಸಾಧ್ಯವಾಗಿ ಗುಲಾಂ ಸಂತೆ ತಲೆಹಾಕಿದವು. ಮಹಾ ಸಾಹಸಿಗಳು ದೂರದೇಶಗಳಿಗೆ ಹೊರಟರು; ಗಂಡಸರು, ಹೆಂಗಸರು ಮಕ್ಕಳನ್ನು ಸಹ ಗುಲಾಮರನ್ನಾಗಿ ಹಿಡಿದುತಂದು ಮಾರಾಟಕ್ಕಾರಂಭಿಸಿದರು. ಗ್ರೀಸ್, ರೋಮ್, ಈಜಿಪ್ಟುಗಳ ಘನತೆ ಕೀರ್ತಿಗಳ ಮೂಲಾಧಾರವೆಂದರೆ ಸುವ್ಯವಸ್ಥಿತವಾದ ಗುಲಾಮ್ ಪದ್ಧತಿ.

ಈ ಗುಲಾಮತನ ಭರತಖಂಡದಲ್ಲೂ ಆಗ ಇತ್ತೆ? ಬಹುಶಃ ಇಲ್ಲ. ಚೀನಾದೊಳಗೂ ಇಲ್ಲ. ಅಂದರೆ ಪ್ರಾಚೀನ ಚೀನಾ ಭಾರತಗಳಲ್ಲಿ ಗುಲಾಮಗಿರಿಯೇ ಇರಲಿಲ್ಲವೆಂದಲ್ಲ, ಇತ್ತು; ಆದರೆ ಅದು ಕೇವಲ ಮನೆಗಳಲ್ಲಿ ಮಾತ್ರವಿತ್ತು. ಮನೆಯಲ್ಲಿ ಕೆಲವರನ್ನು ಗುಲಾಮರೆಂದು ಭಾವಿಸುತ್ತಿದ್ದರು. ಭೂಮಿ ತೋಟ ತುಡಿಕೆಗಳಲ್ಲೂ ಇತರ ಕಡೆಗಳಲ್ಲೂ ಕೆಲಸಮಾಡಲು ಭಾರತದಲ್ಲಾಗಲಿ ಚೀನಾದಲ್ಲಾಗಲಿ ಗುಲಾಮರ ಹಿಂಡುಗಳನ್ನು ನೇಮಿಸುತ್ತಿರಲಿಲ್ಲ. ಹೀಗೆ ಇವೆರಡು ಜನಾಂಗಗಳೂ ಪರಮ ನೀಚತನದ ಗುಲಾಮಗಿರಿಗೆ ವಶವಾಗಲಿಲ್ಲ.

ರೋಮ್ ಬೆಳೆಯಿತು; ಪೆಟ್ರಿಷಿಯನ್ನರ ಲಾಭ ಸಂಪಾದನೆಗೆ ತುದಿಮೊದಲಿಲ್ಲವಾಯಿತು. ಅವರು ದಿನದಿನಕ್ಕೂ ಶ್ರೀಮಂತರಾಗುತ್ತ ಬಂದರು; ಪ್ರವರ್ಧಮಾನರಾಗುತ್ತ ಬಂದರು. ಪ್ಲೆಬಿಯನ್ನರು ಸದಾ ಬಡವರೇ. ಪೆಟ್ರಿಷಿಯನರು ಅವರ ಮೇಲೆ ಸವಾರಿಮಾಡುತ್ತ ಬಂದರು. ಪೆಟ್ರಿಷಿಯನರೂ ಪ್ಲೆಬಿಯನರೂ ಇಬ್ಬರೂ ಸೇರಿ ಬಡಪಾಯಿ ಗುಲಾಮರಮೇಲೆ ಸವಾರಿಮಾಡುತ್ತ ಬಂದರು.

ರೋಮ್ ಬೆಳೆದಹಾಗೆಲ್ಲ ಅದನ್ನು ಹೇಗೆ ಆಳುತ್ತಿದ್ದರು ಗೊತ್ತೆ? 'ಸೆನೆಟ್' ಮೂಲಕವೆಂದು ಮೊದಲೇ ಹೇಳಿದೆ. ಆರಿಸಿದ ಇಬ್ಬರು 'ಕಾನ್ಸಲು'ಗಳು ಈ ಸೆನೆಟಿನ ಸದಸ್ಯರನ್ನು ನಾಮಕರಣಮಾಡುತ್ತಿದ್ದರೆಂದು ತಿಳಿಸಿದೆ. 'ಕಾನ್ಸಲು' ಗಳನ್ನು ಆರಿಸಿದವರು ಯಾರು? ಯಾರು ಯಾರಿಗೆ ವೋಟಿತ್ತೋ ಅವರೆಲ್ಲರೂ. ಮೊದಮೊದಲು ರೋಮ್ ಸಣ್ಣದಾಗಿ ನಗರ ರಾಷ್ಟ್ರದಂತಿತ್ತು. ಪ್ರಜೆಗಳೆಲ್ಲ ರೋಮಿನಲ್ಲೋ, ಅದರ ನೆರೆಹೊರೆಯಲ್ಲೋ ವಾಸಮಾಡುತ್ತಿದ್ದರು. ಅವರೆಲ್ಲ ಒಟ್ಟಿಗೆ ಸೇರಿ ವೋಟು ಮಾಡುವುದು ಕಷ್ಟವಾಗಿರಲಿಲ್ಲ. ರೋಮ್ ಬೆಳೆದಂತೆಲ್ಲ ರೋಮಕರನೇಕರು ನಗರದಿಂದ ಬಹುದೂರ ಪ್ರದೇಶಗಳಲ್ಲಿರಬೇಕಾಗಿ ಬಂತು. ಆದಕಾರಣ ಅವರು ವೋಟುಮಾಡಲು ಸಾಧ್ಯವಿರಲಿಲ್ಲ. ಈಗಿನಂತೆ 'ಪ್ರತಿನಿಧಿ ಸರಕಾರ' ಪದ್ಧತಿಯನ್ನಾ ಕಾಲದವರು ಕಲ್ಪಿಸಿಕೊಂಡು ಆಚರಣೆಗೆ ತರಲು ಅವರು ಸಮರ್ಥರೆನಿಸಲಿಲ್ಲ. ನ್ಯಾಷನಲ್ ಅಸೆಂಬ್ಲಿ, ಪಾರ್ಲಿಮೆಂಟ್, ಕಾಂಗ್ರೆಸ್‌ಗಳಿಗೆಲ್ಲ ಒಂದೊಂದು ಕ್ಷೇತ್ರವೂ ಪ್ರತಿನಿಧಿಗಳನ್ನು ಆರಿಸುತ್ತದೆ. ಹೀಗೆ ರಾಷ್ಟ್ರವೆಲ್ಲ ಒಂದು ಸಣ್ಣ ಸಭೆಯ ರೂಪದಲ್ಲಿ ಸೇರುತ್ತದೆ. ಹಳೆಯ ರೋಮಕರಿಗೆ ಇದು

ಹೊಳೆಯುಲಿಲ್ಲ. ದೂರ ಪ್ರದೇಶಗಳಲ್ಲಿದ್ದವರು ಓಟುಮಾಡಲು ಸಾಧ್ಯವಿಲ್ಲ ವೆಂದು ರೋಮಿನಲ್ಲಿದ್ದವರು ಮಾತ್ರ ಓಟುಮಾಡುತ್ತಿದ್ದರು. ದೂರದಲ್ಲಿದ್ದವರಿಗೆ ಇಲ್ಲಿ ಏನು ನಡೆಯುತ್ತಿತ್ತೋ ಗೊತ್ತಿರಲಿಲ್ಲ. ಆ ಕಾಲದಲ್ಲಿ ಪತ್ರಿಕೆಗಳಾಗಲಿ, ಪುಸ್ತಕಗಳಾಗಲಿ ಇದ್ದವೆ? ಇಲ್ಲ. ಅನೇಕರಿಗೆ ಓದುಬರಹವೇ ಬಾರದು. ರೋಮಿನಿಂದ ದೂರವಾಗಿ ನೆಲೆಸಿದ್ದವರಿಗೆ ಓಟಿನ ಅಧಿಕಾರವಿದ್ದರೂ ಅದರಿಂದ ಅವರಿಗೆ ಲೇಶವೂ ಉಪಯೋಗವಾಗಲಿಲ್ಲ. ಅಧಿಕಾರವಿದ್ದರೂ ದೂರವು ಅಧಿಕಾರವನ್ನು ನುಂಗಿತು.

ಚುನಾವಣೆಗಳಲ್ಲೇ ಆಗಲಿ, ಬಹು ಮುಖ್ಯವಾದ ವಿಚಾರ ನಿರ್ಣಯಗಳಲ್ಲೇ ಆಗಲಿ,ಭಾಗವಹಿಸುತ್ತಿದ್ದವರು ನಿಜವಾಗಿಯೂ ಕೇವಲ ರೋಮನ್ ನಿವಾಸಿಗಳು. ಮರೆಮಾಡಿದ ಸ್ಥಳಗಳಿಗೆ ಹೋಗಿ ಬಯಲಲ್ಲಿ ಓಟುಮಾಡುತ್ತಿದ್ದರು. ಓಟುಗಾರರಲ್ಲಿ ಬಡ ಪ್ಲೆಬಿಯನ್ನರೇ ಹೆಚ್ಚು. ದೊಡ್ಡ ದೊಡ್ಡ ಪದವಿಗಳನ್ನೂ, ಅಧಿಕಾರಗಳನ್ನೂ ಬಯಸಿದ ಶ್ರೀಮಂತ ಪೆಟ್ರಿಷಿಯನ್ನರು ಪ್ಲೆಬಿಯನ್ನರಿಗೆ ಲಂಚಕೊಟ್ಟು ಓಟು ಪಡೆಯುತ್ತಿದ್ದರು. ಈಗಿನ ಕಾಲದ ಚುನಾವಣೆಗಳಲ್ಲಿ ಎಷ್ಟು ಲಂಚ, ಎಷ್ಟು ಮೋಸಗಾರಿಕೆ ಉಂಟೋ ರೋಮನ್ ಚುನಾವಣೆಗಳಲ್ಲೂ ಅಷ್ಟೇ ಇತ್ತು.

ಇಟಲಿಯಲ್ಲಿ ರೋಮನ್ ಬೆಳೆಯುತ್ತಿರಲು ಉತ್ತರ ಆಫ್ರಿಕದಲ್ಲಿ ಕಾರ್ಥೇಜ್ ಪ್ರಬಲವಾಗುತ್ತ ಬಂತು. ಕಾರ್ಥೇಜಿನವರು ಫೊನೀಷಿಯನ್ ವಂಶೀಯರು. ಅದಕಾರಣ ಸಮುದ್ರಯಾನ, ವ್ಯಾಪಾರ ಆ ಜನರಿಗೆ ಪರಂಪರೆಯಾಗಿ ಬಂದ ವಿದ್ಯೆ. ಅವರದೂ ಪ್ರಜಾತಂತ್ರ ಪ್ರಭುತ್ವವೇ – ರಿಪಬ್ಲಿಕ್. ಕಾರ್ಥೇಜಿನ ಪ್ರಜಾತಂತ್ರ ಪ್ರಭುತ್ವ ರೋಮಿಗಿಂತ ವಿಶೇಷವಾಗಿ ಹಣವಂತರ ಪ್ರಭುತ್ವ. ಪೌರ ರಾಷ್ಟ್ರ; ಅಸಾಧ್ಯ ಗುಲಾಮ ಜನಸಂಖ್ಯೆ.

ದಕ್ಷಿಣ ಇಟಲಿ, ಮೆಸ್ಸಿನಾಗಳಲ್ಲಿ, ರೋಮ್ ಕಾರ್ಥೇಜುಗಳ ಮಧ್ಯೆ ಹಿಂದಿನ ಕಾಲದಲ್ಲಿ ಗ್ರೀಕ್ ವಸಾಹತುಗಳಿದ್ದವು. ರೋಮನ್ ಕಾರ್ಥೇಜುಗಳೆರಡೂ ಒಂದಾಗಿ ಗ್ರೀಕರನ್ನು ಓಡಿಸಿಬಿಟ್ಟವು. ಇದಾದಮೇಲೆ ಕಾರ್ಥೇಜು, ಸಿಸಿಲಿಯನ್ನಾಕ್ರಮಿಸಿತು. ರೋಮನ್ ಇಟಲಿಯ ದಕ್ಷಿಣ ಪಾದಮೂಲವನ್ನು ಮುಟ್ಟಿತು. ರೋಮನ್ ಕಾರ್ಥೇಜುಗಳ ಸ್ನೇಹ ಬಹಳಕಾಲ ನಿಲ್ಲಲಿಲ್ಲ. ಎರಡಕ್ಕೂ ಲಟಾಪಟಿ ಗಾರಂಭವಾಯಿತು; ಪರಮ ವೈರ ಬೆಳೆಯಿತು. ಎದುರುಬದರಾಗಿದ್ದ ಎರಡು ಪ್ರಬಲ ರಾಷ್ಟ್ರಗಳಿಗೆ ಮೆಡಿಟರೇನಿಯನ್ ಸಮುದ್ರ ತೀರ ಸಣ್ಣದೆನಿಸಿತು. ಉಭಯ ರಾಷ್ಟ್ರಗಳಿಗೂ ದುರಾಶೆ ಹುಟ್ಟಿತು. ರೋಮನ್ ಬೆಳೆಯುತ್ತಿತ್ತು; ಅದಕ್ಕೆ ಸರಿಯಾಗಿ ತಾರುಣ್ಯದ ಆತ್ಮವಿಶ್ವಾಸ ಬೇರೆ. ಮೊದಲು ಮೊದಲು ಕಾರ್ಥೇಜು "ನಿನ್ನೆ ಮೊನ್ನೆ ಹುಟ್ಟಿದ್ದು ಈ ರೋಮನ್, ಸಾಗರಕ್ಕೊಡೆಯ ನಾನು" ಎಂದು ಹಿಗ್ಗುತ್ತಿತ್ತು. ಇವೆರಡು ರಾಷ್ಟ್ರಗಳೂ ಒಂದು ಶತಮಾನಕಾಲ ಹೊಡೆದಾಡಿದವು;

ಮಧ್ಯೆಮಧ್ಯೆ ಅಲ್ಪಕಾಲ ಶಾಂತಿ ಅಷ್ಟೆ. ಕ್ರೂರ ವನ್ಯಮೃಗಗಳಂತೆ ಕಾದಾಡಿದರು. ಅಸಂಖ್ಯಾತ ಪ್ರಜೆಗಳಿಗೆ ನರಕಯಾತನೆ ಉಂಟುಮಾಡಿದರು. ಮೂರು ಯುದ್ಧಗಳಾದವು. ಪ್ಯೂನಿಕ್ ಯುದ್ಧಗಳೆಂದು ಹೆಸರು ಅವಕ್ಕೆ. ಮೊದಲನೆ ಪ್ಯೂನಿಕ್ ಯುದ್ಧ ೨೩ ವರ್ಷಕಾಲ (ಕ್ರಿಸ್ತಪೂರ್ವ ೨೬೪-೨೪೧) ನಡೆಯಿತು; ಕಡೆಗೂ ರೋಮಿಗೇ ಜಯವಾಯಿತು. ೨೨ ವರ್ಷಗಳ ಅನಂತರ ಎರಡನೆ ಪ್ಯೂನಿಕ್ ಯುದ್ಧಾರಂಭವಾಯಿತು. ಕಾರ್ಥೇಜು ಜಗಜ್ಜೇತ ಹ್ಯಾನಿಬಾಲ್ ಎಂಬ ದಂಡನಾಯಕನನ್ನು ಕಳಿಸಿತು. ಹದಿನೈದು ವರ್ಷಗಳ ಕಾಲ ಹ್ಯಾನಿಬಾಲ್ ರೋಮನ್ನು ಚಿತ್ರಹಿಂಸೆಗೆ ಗುರಿಮಾಡಿದ; ರೋಮಕರಿಗೆ ಮಹಾಯಾತನೆ ಕೊಟ್ಟ. ಕದನಗಳಲ್ಲಿ ರೋಮಕರನ್ನು ಕತ್ತರಿಸಿಹಾಕಿದ. ಕ್ರಿಸ್ತಪೂರ್ವ ೨೧೬ರಲ್ಲಿ ನಡೆದ ಕ್ಯಾನೆ ಎಂಬ ಕದನ ಈ ದೃಷ್ಟಿಯಿಂದ ಮಹಾ ಘೋರವಾದದ್ದು. ಕಾರ್ಥೇಜಿನಿಂದ ಸಹಾಯವಿಲ್ಲದೆ ಹ್ಯಾನಿಬಾಲ್ ಇಂಥ ವಿಜಯವನ್ನು ಸಂಪಾದಿಸಿದ. ರೋಮಕರೀಗ ಸಮುದ್ರಪ್ರಭುಗಳಾದಕಾರಣ ಕಾರ್ಥೇಜಿಗೂ ಹ್ಯಾನಿಬಾಲಿಗೂ ಲೇಶವೂ ಸಂಬಂಧವಿಲ್ಲದಂತೆ ಮಾಡಿಬಿಟ್ಟರು. ಸೋಲು ಸರ್ವನಾಶವಾದರೂ, ಅಹೋರಾತ್ರಿ ಹ್ಯಾನಿಬಾಲನ ಕ್ರೂರ ಕಾಟವಾದರೂ ರೋಮಕರು ಸಗ್ಗಲಿಲ್ಲ; ತಮ್ಮ ಪರಮ ವೈರಿಯೊಂದಿಗೆ ಹೋರಾಡಿದರು. ನೇರವಾಗಿ ರಣರಂಗದಲ್ಲಿ ಹ್ಯಾನಿಬಾಲನನ್ನೆದುರಿಸಲು ರೋಮಕರಿಗೆ ಮಹಾ ಭಯ. ಯುದ್ಧಬಿಟ್ಟು ಅವನಿಗೆ ನಾನಾ ತೊಂದರೆ ಕೊಡುತ್ತ ಬಂದರು. ಅವನಿಗೂ ಇತರರಿಗೂ ಯಾವ ರೀತಿಯ ಮಾರ್ಗ ಸಂಬಂಧವಿಲ್ಲದಂತೆ ಮಾಡಿಬಿಟ್ಟರು. ಕದನ ಹೂಡದೆ ಶತ್ರುಗಳಿಗೆ ಹಿಂಸೆ ಕೊಡುತ್ತಿದ್ದವ ದಂಡನಾಯಕ ಫೇಬಿಯಸ್. ಈ ಫೇಬಿಯಸ್ ರಣರಂಗ ಪ್ರವೇಶ ಮಾಡದೆ ಹತ್ತು ವರ್ಷಗಳ ಕಾಲ ಹೋರಾಡಿದ. ಇವನೊಬ್ಬ ಮಹಾವೀರನೆಂದು ಸ್ಮರಣಾರ್ಹನೆಂದು ನಾನವನ ಹೆಸರನ್ನೆತ್ತಲಿಲ್ಲ. ಇಂಗ್ಲಿಷ್ ಭಾಷೆಯಲ್ಲಿ ಅವನ ಹೆಸರು ಒಂದು ಮಾತಿನ ಜನನಕ್ಕೆ ಕಾರಣವಾಗಿದೆ. 'ಫೇಬಿಯನ್' ಎಂಬುದಾ ಮಾ ೨. 'ಫೇಬಿಯನ ರ' ಯುಕ್ತಿಯೆಂದರೆ ಒತ್ತಾಯಮಾಡದಿರುವುದು, ಮೇಲೆ ಬೀಳದೆ, ಯುದ್ಧ ಮಾಡದೆ ದೀರ್ಘಕಾಲದ ಘರ್ಷಣದಿಂದ ಜಯಗಳಿಸುವುದು. ಇಂಗ್ಲೆಂಡಿನಲ್ಲಿ 'ಫೇಬಿಯನ್ ಸಂಘ'ವೊಂದಿದೆ; ಅದು ಸಮಾಜಸಮತಾವಾದದಲ್ಲಿ ನಂಬಿಕೆಯನ್ನಿಟ್ಟಿದೆ. ಆತುರ ಆತುರವಾಗಿ, ಇದ್ದಕ್ಕಿದ್ದಹಾಗೇ ಬದಲಾವಣೆ ಉಂಟುಮಾಡುವುದರಲ್ಲಿ ಅದಕ್ಕೆ ವಿಶ್ವಾಸವಿಲ್ಲ.

ಹ್ಯಾನಿಬಾಲನು ಇಟಲಿಯ ಬಹು ಭಾಗವನ್ನು ಮರುಭೂಮಿಯಾಗಿ ಮಾಡಿಬಿಟ್ಟ. ಆದರೂ ಹಟದಿಂದ, ತಾಳ್ಮೆಯಿಂದ ರೋಮ್ ಕಡೆಗೆ ಜಯವನ್ನು ಗಳಿಸಿತು. ಕ್ರಿಸ್ತಪೂರ್ವ ೨೦೨ರಲ್ಲಿ ಸೇಮಾಕದನದಲ್ಲಿ ಹ್ಯಾನಿಬಾಲ್ ಸೋತುಹೋದ; ಸ್ಥಳದಿಂದ ಸ್ಥಳಕ್ಕೆ ಓಡಿ ತಲೆಮರೆಸಿಕೊಂಡ. ಪರಮ ವೈರಿಗಳಾದ ರೋಮಕರು

ಆವನನ್ನು ಒಂದು ಸ್ಥಳದಲ್ಲಿ ಇರಗೊಡಿಸಲಿಲ್ಲ. ಕಟ್ಟಕಡೆಗೆ ಹ್ಯಾನಿಬಾಲ್ ವಿಷ ತಿಂದು ಸತ್ತ.

ಕಾರ್ಥೇಜಿಗೂ ರೋಮಿಗೂ ಅರ್ಧ ಶತಮಾನಕಾಲ ಶಾಂತಿಯುಂಟಾಯಿತು. ಕಾರ್ಥೇಜಿಯನರ ಮೇಲೆ ಮೂರನೆಯ ಸಲ ಯುದ್ಧ ಹೂಡಿತು. ಈ ಯುದ್ಧ ಕಾರ್ಥೇಜಿನವರ ನಾಶದಲ್ಲಿ, ಕಾರ್ಥೇಜಿನ ಧ್ವಂಸದಲ್ಲಿ ಮುಕ್ತಾಯವಾಯಿತು. ಮೆಡಿಟರೇಯನ್ ರಾಣಿಯೆನಿಸಿ ಮೆರೆದ ಕಾರ್ಥೇಜ್ ನಗರವನ್ನು ವಿನಾಶಮಾಡಿ, ಆ ಸ್ಥಳವನ್ನು ನೇಗಿಲಿನಿಂದ ಉತ್ತುಬಿಟ್ಟರು.

೨೮

# ರಿಪಬ್ಲಿಕ್ ರೋಮ್ ಸಾಮ್ರಾಜ್ಯವಾಯಿತು

ಏಪ್ರಿಲ್ ೯, ೧೯೩೨

ಕಾರ್ಥೇಜಿನ ಅವತಾರ ಪೂರ್ತಿಯಾಯಿತು; ರೋಮ್ ಪ್ರಬಲಿಸಿತು; ಪಶ್ಚಿಮಾರ್ಧಗೋಳದಲ್ಲಿ ಅದನ್ನೆದುರಿಸುವವರೇ ಇಲ್ಲವಾಯಿತು. ಗ್ರೀಕ್ ರಾಜ್ಯಗಳನ್ನಾಗಲೇ ಅದು ವಶಪಡಿಸಿಕೊಂಡಿತ್ತಲ್ಲ, ಕಾರ್ಥೇಜಿನ ರಾಜ್ಯವೆಲ್ಲ ಆದರ ಕೈಗೆ ಬಿತ್ತು. ಎರಡನೆಯ ಪ್ಯೂನಿಕ್ ಯುದ್ಧಾನಂತರ ಸಿಸಿಲಿಯೂ ರೋಮಿಗೆ ಸೇರಿಹೋಯಿತು. ಇಷ್ಟಾದರೂ ರೋಮ್ ಚಕ್ರಾಧಿಪತ್ಯದಲ್ಲಿ ಮೆಡಿಟರೇನಿಯನ್ ರಾಜ್ಯಗಳು ಮಾತ್ರ. ಉತ್ತರ, ಮಧ್ಯ ಯುರೋಪೆಲ್ಲ ರೋಮಿನಿಂದ ಸ್ವತಂತ್ರವಾಗಿಯೇ ಇತ್ತು.

ಗೆಲುವು, ವಿಜಯ ಎಂದರೇನು? ರೋಮಿನಲ್ಲಿ ಭೋಗ, ಭಾಗ್ಯ! ಗೆದ್ದ ರಾಷ್ಟ್ರಗಳಿಂದ ರೋಮಿಗೆ ಹೊನ್ನಿನ ಹೊಳೆ ಹರಿಯಲಾರಂಭಿಸಿತು; ಗುಲಾಮರ ಪಡೆ ನಡೆಯಲಾರಂಭಿಸಿತು. ಇದೆಲ್ಲ ಎಲ್ಲಿ ಹೋಯಿತು? ಹಿಂದೆಯೆ ಹೇಳಿದೆನಲ್ಲ; ರೋಮಿನಲ್ಲಿ 'ಸೆನೆಟ್' ಸರಕಾರ. ಆ ಸೆನೆಟಿನಲ್ಲಿದ್ದವರೆಲ್ಲ ಆಗರ್ಭ ಶ್ರೀಮಂತರು. ಈ ಶ್ರೀಮಂತರ ಗುಂಪಿನ ಕೈಯಲ್ಲಿತ್ತು ರೋಮ್' ರಿಪಬ್ಲಿಕ್ ಆಡಳಿತ ಸೂತ್ರ. ಜನಾಂಗ ಜೀವನದ ಮೇಲಣ ಯಾಜಮಾನ್ಯವೆಲ್ಲ ಇವರದೆ. ರೋಮಿನ ವಿಸ್ತಾರವೂ ಬಲವೂ ಹೆಚ್ಚಿದಂತೆಲ್ಲ ಶ್ರೀಮಂತರ ಸಂಪತ್ತೂ ಹೆಚ್ಚಿತು. ಭಾಗ್ಯವಂತರು ಮತ್ತಷ್ಟು ಭಾಗ್ಯವಂತರಾದರು; ಬಡವರು ಮತ್ತಷ್ಟು ಬಡವರಾದರು. ಗುಲಾಮ ಪ್ರಜೆ ಬೆಳೆಯಿತು. ಭೋಗ ಭಾಗ್ಯವೊಂದು ಕಡೆ, ದೀನಬೀನರ ಕಂಗಾಲತನವೊಂದು ಕಡೆ; ಅಕ್ಕಪಕ್ಕದಲ್ಲೇ. ಹೀಗಾದಾಗಲೆಲ್ಲ ಸಾಮಾನ್ಯವಾಗಿ ಗಲಾಟೆಗಳಿದ್ದೇ ಇರುತ್ತವೆ. ಮಾನವಕುಲ ಈ ದುರ್ಭರ ದುಃಖವನ್ನು ಹೇಗೆ ಸಹಿಸು

ವುದೋ ಭಾವಿಸಲಾಶ್ಚರ್ಯಕರ. ಅವರ ಸಹನೆಗೂ ಒಂದು ಮಿತಿ ಇದೆ. ಆ ಮಿತಿ ಮೀರಿದರೆ ಪ್ರಳಯವೆ.

ಶ್ರೀಮಂತರು ಬಡವರನ್ನು ಆಟಪಾಟಗಳಿಂದ, ಕ್ರೀಡಾಸ್ಪರ್ಧೆಗಳಿಂದ ಮನ ಮರೆಸಿ ಮೋಹಗೊಳಿಸುತ್ತಿದ್ದರು. ವಜ್ರಮುಷ್ಟಿಕಾರರನ್ನು (ಗ್ಲೇಡಿಯೇಟರ್) ಕಳದೊಳಗಿಳಿಸಿ, ಪ್ರೇಕ್ಷಕರ ಆನಂದಕ್ಕಾಗಿ ಅವರನ್ನು ಹೊಡೆದಾಡಿರೆನ್ನುತ್ತಿದ್ದರು. ಅವರು ಹೊಡೆದಾಡಿ ಒಬ್ಬರನ್ನೊಬ್ಬರು ಕೊಲ್ಲುತ್ತಿದ್ದರು. ಎಷ್ಟೋ ಮಂದಿ ಗುಲಾಮರು, ಸಂಗ್ರಾಮದಲ್ಲಿ ಹಿಡಿದುತಂದ ಬಂದಿಗಳು ಈ ಆಟದ ದೆಸೆಯಿಂದ ಪ್ರಾಣ ಬಿಡುತ್ತಿದ್ದರು.

ರೋಮನ್ ರಾಷ್ಟ್ರದಲ್ಲಿ ಅವ್ಯವಸ್ಥೆ ಹೆಚ್ಚಿತು. ದಂಗೆ, ಕೊಲೆ ಹೆಚ್ಚಿದವು; ಚುನಾವಣೆಗಳಲ್ಲಿ ಲಂಚಕ್ಕಂತೂ ಮಿತಿಯೇ ಇಲ್ಲ. ಸ್ಪಾರ್ಟಿಕಸ್ ಒಬ್ಬ ಗುಲಾಮ ಗ್ಲೇಡಿಯೇಟರ್. ಬಡತನದಿಂದ ಬಗ್ಗಿಕುಗ್ಗಿದ ಗುಲಾಮರು ಅವನ ನಾಯಕತ್ವದಲ್ಲಿ ದಂಗೆಯೆದ್ದರು. ಅವರನ್ನು ಮಟ್ಟಹಾಕಿ ಘೋರ ಯಾತನೆಗೆ ಗುರಿ ಮಾಡಲಾಯಿತು. ೬೦೦೦ ಮಂದಿಯನ್ನು ಶಿಲುಬೆಗೆ ಜಡಿದರಂತೆ ರೋಮಿನ ಅಪ್ಪಿಯನ್ ರಸ್ತೆಯಲ್ಲಿ.

ದಂಡನಾಯಕರ, ಸಾಹಸಿಗಳ ಪ್ರತಾಪ ಹೆಚ್ಚಿತು; ಸೆನೆಟಿನಲ್ಲಿ ಅವರು ಆಡಿದ್ದೇ ಮಾಟ. ಸರಿ, ಅವರವರಲ್ಲೇ ವೈರ, ಹೊಡೆದಾಟ; ಯಾದವೀ ಕಲಹ ಮೊದಲಾಯಿತು. ಕ್ರಿಸ್ತಪೂರ್ವ ೫೩ರಲ್ಲಿ ರೋಮನ್ ಪಾರ್ಥಿಯಕ್ಕೆ (ಪಾರಿಸ್ತಾನ) ಸೈನ್ಯ ಕಳಿಸಿತು; ಈ ಸೈನ್ಯಗಳಿಗೆಲ್ಲ ಸೋಲೇ. ಕರ್ರಾಹೆ ಕದನದಲ್ಲಿ ರೋಮಕರಿಗೆ ಪೂರ್ಣ ಪರಾಜಯವಾಯಿತು. ಪಾರ್ಥಿಯರು ರೋಮಕ ಸೈನ್ಯವನ್ನೆಲ್ಲ ಧ್ವಂಸಮಾಡಿದರು.

ಈ ಅಸಂಖ್ಯಾತ ದಂಡನಾಯಕರ ಪಡೆಯಲ್ಲಿ ಪಾಂಪೆ, ಜೂಲಿಯಸ್ ಸೀಜರ್, ಎರಡೇ ಹೆಸರು ಎದ್ದುಕಾಣುತ್ತವೆ. ಸೀಜರ್ ಗಾಲನ್ನೂ (ಈಗಿನ ಫ್ರಾನ್ಸ್) ಬ್ರಿಟನ್ನನ್ನೂ ಗೆದ್ದ. ಪಾಂಪೆಯು ಪೂರ್ವದಿಕ್ಕಿಗೆ ಹೋಗಿ ಜಯಗಳಿಸಿದ. ಪಾಂಪೆ ಸೀಜರ್ ಇಬ್ಬರಿಗೂ ಪರಮ ವೈರ, ಇಬ್ಬರಿಗೂ ಆಶೆ ಹೆಚ್ಚು; ಆದಕಾರಣ ಒಬ್ಬರನ್ನು ಕಂಡರೆ ಇನ್ನೊಬ್ಬರಿಗೆ ಆಗದು. ಪಾಪ, ಸೆನೆಟ್ ಮೂಲೆಗೆ ಬಿತ್ತು; ಆದರೂ ಪಾಂಪೆ, ಸೀಜರ್ ಇಬ್ಬರೂ ಅದಕ್ಕೆ ಬಾಯಿಗೌರವ ಸಲ್ಲಿಸುತ್ತಿದ್ದರು. ಸೀಜರು ಪಾಂಪೆಯನ್ನು ಸೋಲಿಸಿದ; ರೋಮನ್ ಸಾಮ್ರಾಜ್ಯದಲ್ಲೆಲ್ಲ ಮುಖ್ಯ ನಾಯಕನಾದ. ರೋಮನ್ ಪ್ರಜಾತಂತ್ರ (ರಿಪಬ್ಲಿಕ್) ಪ್ರಭುತ್ವ. ಆದಕಾರಣ ಅಧಿಕಾರ ಸೂತ್ರಗಳನ್ನೆಲ್ಲ ಸೀಜರನು ವಹಿಸಲಾಗಲಿಲ್ಲ. ಅವನನ್ನು ಅರಸನನ್ನೋ, ಚಕ್ರವರ್ತಿಯನ್ನೋ ಮಾಡಬೇಕೆಂಬ ಪ್ರಯತ್ನ ನಡೆದವು. ಕಿರೀಟಧಾರಣ ಮಾಡಿಸಿಕೊಳ್ಳುವ ಆಸೆ ಅವನಿಗೂ ಇತ್ತು. ಆದರೆ ದೀರ್ಘಕಾಲದಿಂದ ಪ್ರಜಾ

ತಂತ್ರವೇ ರೂಢಿಯಲ್ಲಿತ್ತಾಗಿ ಅವನೂ ಹಿಂಜರಿದ. ಪ್ರಜಾತಂತ್ರ ಪಕ್ಷಪಾತ ವಿಪರೀತವಾಗಿತ್ತು ಜನರಲ್ಲಿ. ಆದ್ದರಿಂದ ಬ್ರೂಟಸ್ ಮೊದಲಾದವರು ಸೇರಿ ಸೀಜರನ್ನು ತಿವಿದು ಕೊಂದರು. ಷೇಕ್ಸ್ಪಿಯರನ 'ಜೂಲಿಯಸ್ ಸೀಜರ್' ನಾಟಕ ನೀನು ಓದಿರಬೇಕಲ್ಲವೆ? ಅದರಲ್ಲಿದೆ ಈ ಸನ್ನಿವೇಶ.

ಕ್ರಿ. ಪೂ. ೪೪ರಲ್ಲಿ ಸೀಜರನ ಕೊಲೆ. ಆದರೆ ಈ ಸಾವಿನಿಂದ ರೋಮನ್ 'ರಿಪಬ್ಲಿಕ್' ಉಳಿಯಲಿಲ್ಲ. ಸೀಜರನ ದತ್ತುಮಗ ಆಕ್ಟೇವಿಯಸ್, ಅವನ ಸ್ನೇಹಿತ ಮಾರ್ಕ್ ಆಂಟೊನಿ ಇಬ್ಬರೂ ಸೀಜರನ ಕೊಲೆಗೆ ಪ್ರತಿಕೊಲೆಮಾಡಿದರು. ಅರಸುತನ ಕೈಗೆ ಬಂತು. ಆಕ್ಟೇವಿಯಸ್ ನಾಯಕನಾದ. 'ಪ್ರಿನ್ಸೆಪ್ಸ್' ಕರಗಿಹೋಯಿತು; 'ರಿಪಬ್ಲಿಕ್' ಮಾಯವಾಯಿತು. ಹೆಸರಿಗೇನೋ ಸೆನೆಟ್ ಇತ್ತಾಗಲಿ ಅಧಿಕಾರ ಲೇಶವೂ ಇರಲಿಲ್ಲ.

ಆಕ್ಟೇವಿಯಸ್ ನಾಯಕನಾಗುತ್ತಲೇ 'ಅಗಸ್ಟಸ್ ಸೀಜರ್' ಎಂಬ ಬಿರುದನ್ನು ಧರಿಸಿದ. ಅವನ ತರುವಾಯ ಪಟ್ಟಕ್ಕೆ ಬಂದವರಿಗೂ 'ಸೀಜರ್' ಎಂಬ ಹೆಸರೇ ಬಂತು. ಸೀಜರ್ ಶಬ್ದಕ್ಕೇ 'ಚಕ್ರವರ್ತಿ' ಎಂದು ಅರ್ಥವಾಯಿತು. 'ಕೈಸರ್', 'ಜಾರ್' ಎಂಬ ಮಾತೂ 'ಸೀಜರ್'ನಿಂದಲೇ ಹುಟ್ಟಿವೆ. 'ಕೈಸರ್-ಎ-ರೂಮ್', 'ಕೈಸರ್-ಎ-ಹಿಂದ್' ಎಂಬ ಹಿಂದುಸ್ತಾನಿ ಶಬ್ದಗಳೂ ಇದರಿಂದ ಬಂದವೇ. ವಿಲಾಯಿತಿಯ ಜಾರ್ಜ್ ಪ್ರಭುವಿಗೆ 'ಕೈಸರ್-ಎ-ಹಿಂದ್' ಎಂಬ ಬಿರುದಿದೆ. ಜರ್ಮನಿಯ ಕೈಸರೂ ಹೋದ; ಹಾಗೆಯೇ ಆಸ್ಟ್ರಿಯದ ಕೈಸರೂ, ತುರ್ಕಿಯ ಕೈಸರೂ ಹೋದ; ರಷ್ಯಾದ ಜಾರೂ ಹೋದ. ರೋಮಿಗೆ ಬ್ರಿಟನ್ನನ್ನು ಗೆದ್ದುಕೊಟ್ಟ ಸೀಜರನ ಹೆಸರನ್ನು ಈಗ ಬ್ರಿಟನ್ನಿನ ಅರಸರೊಬ್ಬರು ಮಾತ್ರ ಧರಿಸಿರುವುದು ಪರಮಾಶ್ಚರ್ಯ ಕೌತುಕವೇ ಸರಿ.

ಸೀಜರನ ಹೆಸರು ಸಾಮ್ರಾಜ್ಯ ವೈಭವಲಾಂಛನವೆನಿಸಿದೆ. ಗ್ರೀಸಿನ ಫಾರ್ಸೇಲಸ್ ಬಳಿ ಪಾಂಪೆಯು ಸೀಜರನ್ನು ಸೋಲಿಸಿದ್ದರೆ ಏನಾಗುತ್ತಿತ್ತು? ಬಹುಶಃ ಪಾಂಪೆ ಸಮ್ರಾಟನಾಗುತ್ತಿದ್ದ. 'ಪಾಂಪೆ' ಎಂಬ ಮಾತಿಗೆ 'ಚಕ್ರವರ್ತಿ'ಯೆಂಬ ಅರ್ಥ ಬರುತ್ತಿತ್ತು. ಆಗ ಜರ್ಮನ್ ಪಾಂಪೆ! ಜಾರ್ಜ್‌ಪ್ರಭುವಿಗೆ 'ಪಾಂಪೆ-ಇ-ಹಿಂದ್' ಎಂಬ ಬಿರುದು ಬರುತ್ತಿತ್ತು!

ರೋಮ್ ಹೀಗೆ 'ರಿಪಬ್ಲಿಕ್'ನಿಂದ ಮಹಾ ಸಾಮ್ರಾಜ್ಯವಾಗುತ್ತಿರಲು ಈಜಿಪ್ಟಿನಲ್ಲೊಬ್ಬ ನಾರಿ ಇದ್ದಳು. ಆಕೆ ಜಗನ್ಮೋಹಿನಿಯೆನಿಸಿ ಇತಿಹಾಸ ಪ್ರಸಿದ್ಧಳಾದಳು. ಕ್ಲಿಯೊಪ್ಯಾಟ್ರ ಎಂಬುದಾಕೆಯ ಹೆಸರು. ಅವಳ ಕೀರ್ತಿಯು ನಿಷ್ಕಳಂಕವಲ್ಲವಾದರೂ ಸೌಂದರ್ಯದಿಂದ ಇತಿಹಾಸದ ಸ್ವರೂಪವನ್ನೇ ಪರಿವರ್ತನಗೊಳಿಸಿದ ಹಲವೇ ವ್ಯಕ್ತಿಗಳಲ್ಲಿ ಈಕೆಯೊಬ್ಬಳು. ಜೂಲಿಯಸ್ ಸೀಜರ್ ಈಜಿಪ್ಟಿಗೆ ಹೋದಾಗ ಕ್ಲಿಯೋಪ್ಯಾಟ್ರ ಇನ್ನು ಹುಡುಗಿ. ಆಮೇಲೆ ಆಕೆ

ಮಾರ್ಕ್ ಆಂಟೊನಿಯ ಮಹಾಮಿತ್ರಳೆನಿಸಿದಳು ; ಆದರೆ ಅವನಿಗೆಳ್ಳಷ್ಟೂ ಉಪಕಾರ ಮಾಡಲಿಲ್ಲ. ಮಹಾ ನೌಕಾಯುದ್ಧವಾಗುತ್ತಿದ್ದಾಗ ತನ್ನ ನಾವೆಗಳನ್ನು ಹಿಂದಕ್ಕೆಳೆದು ಆಂಟೊನಿಗೆ ಮಹಾದ್ರೋಹಮಾಡಿ ಅವನ ಕೈಬಿಟ್ಟಳು ಈಜಿಪ್ಟಿಗೆ ಹೋಗಿ ಬಂದಮೇಲೆ ಸೀಜರನು, 'ನಾನು ಚಕ್ರವರ್ತಿ; ದೇವದತ್ತವಾದ ಬಲ ನನ್ನದು' ಎಂದು ಭಾವಿಸಲಾರಂಭಿಸಿರಬೇಕು. ಈಜಿಪ್ಟಿನಲ್ಲಿ 'ರಿಪಬ್ಲಿಕ್' ಇರಲಿಲ್ಲ; ರಾಜರೇ ಆಳುತ್ತಿದ್ದರು. ಅರಸರ ಅಧಿಕಾರಕ್ಕೆ ಮಿತಿಯೇ ಇಲ್ಲ; ಅರಸನೆಂದರೆ ಪ್ರತ್ಯಕ್ಷ ದೈವವೆಂದೇ ಭಾವನೆ. ಇದು ಪ್ರಾಚೀನ ಈಜಿಪ್ಟರ ಕಲ್ಪನೆ. ಸಿಕಂದರನ ಅವಸಾನಾನಂತರ ಗ್ರೀಕ್ ಟೋಲೆಮಿಗಳು ಈಜಿಪ್ಟನ್ನಾಳಿದರು. ಇವರು ಈಜಿಪ್ಟಿನ ಆಚಾರ ವಿಚಾರಗಳನ್ನೆಲ್ಲ ಅನುಸರಿಸಿದರು. ಈ ಟೋಲೆಮಿಗಳ ವಂಶಕ್ಕೆ ಸೇರಿದವಳು ಕ್ಲಿಯೊಪ್ಯಾಟ್ರಾ; ಗ್ರೀಕ್ ಅಥವಾ ಮೆಸಿಡೋನಿಯಾ ರಾಜಪುತ್ರಿ.

"ನಾವಿಷ್ಣುಃ ಪೃಥಿವೀಪತಿಃ" ಎಂಬ ಈಜಿಪ್ಟರ ಕಲ್ಪನೆಯು - ಇದಕ್ಕೆ ಕ್ಲಿಯೋಪಾಟ್ರಾ ಎಷ್ಟುಮಟ್ಟಿಗೆ ಕಾರಣಕರ್ತಳೋ ಗೊತ್ತಿಲ್ಲ - ರೋಮ್‌ವರೆಗೂ ಹೋಯಿತು; ಅಲ್ಲಿ ಮನೆಮಾಡಿತು: ಜೂಲಿಯಸ್ ಸೀಜರನು ಜೀವಿಸಿದ್ದಾಗ, ರಿಪಬ್ಲಿಕ್ ಇನ್ನೂ ಉಚ್ಛ್ರಾಯಸ್ಥಿತಿಯಲ್ಲಿದ್ದಾಗಲೂ ಸೀಜರನ ಪ್ರತಿಮೆಗಳನ್ನು ಮಾಡಿಸಿ ಸ್ಥಾಪಿಸಿದರು, ಪೂಜಿಸಿದರು. ಮುಂದೆ ಇದು ರೋಮನ್ ಸಮ್ರಾಟರಲ್ಲಿ ಆಚಾರವೆನಿಸಿತು.

ರೋಮಿನ ಚರಿತ್ರೆಯಲ್ಲಿ ನಾವು ಒಂದು ಪರಿವರ್ತನಕಾಲಕ್ಕೆ ಬಂದಿದ್ದೇವೆ: 'ರಿಪಬ್ಲಿಕ್' ಅಂತ್ಯವೇ ಆ ಪರಿವರ್ತನ ಸಮಯ. ಕ್ರಿಸ್ತಶಕ ೨೭ರಲ್ಲಿ ಆಕ್ಟೇವಿಯನು ಆಗಸ್ಟಸ್ ಸೀಜರೆಂಬ ಹೆಸರಿನಿಂದ ಪಟ್ಟಕ್ಕೆ ಬಂದನು. ಮುಂದೆ ರೋಮಿನ, ಅದರ ಚಕ್ರವರ್ತಿಗಳ ಕತೆಯನ್ನು ಮುಂದುವರಿಸೋಣ. ಈ ಮಧ್ಯೆ ರಿಪಬ್ಲಿಕ್ ಕಡೆಗಾಲದಲ್ಲಿ ರೋಮನ್ ಸಾಮ್ರಾಜ್ಯದೊಳಗಿನ ರಾಜ್ಯಗಳ ಕಡೆ ನೋಡುವ. ರೋಮ್ ಇಟಲಿಯನ್ನಾಳುತ್ತಿತ್ತು; ಪಶ್ಚಿಮದಲ್ಲಿ ಸ್ಪೇಯಿನ್, ಗಾಲ್ (ಫ್ರಾನ್ಸ್) ಗಳ ಮೇಲೆ ಪ್ರಭುತ್ವ ನಡೆಸುತ್ತಿತ್ತು: ಪೂರ್ವದಲ್ಲಿ ಗ್ರೀಸ್, ಏಸಿಯಾ ಮೈನರ್ ಅದಕ್ಕೆ ಸೇರಿದ್ದವು ಇಲ್ಲಿದ್ದ ಪರ್ಗಮಂ ಎಂಬ ಗ್ರೀಕ್ ರಾಜ್ಯ ನೆನಪಿದೆಯಷ್ಟೆ. ಉತ್ತರ ಆಫ್ರಿಕದಲ್ಲಿ ಮಿಶ್ರದೇಶ ರೋಮಿನ ರಕ್ಷಣೆಗೊಳಗಾಗಿತ್ತು; ಹೆಸರಿಗೆ ಮಾತ್ರ ಸಮಾನ ರಾಷ್ಟ್ರ. ಕಾರ್ಥೇಜು, ಕೆಲವು ಮೆಡಿಟರೇನಿಯನ್ ರಾಜ್ಯಗಳೂ ರೋಮಿಗೆ ವಶವಾಗಿದ್ದವು ಅಂದಿನ ರೋಮನ್ ಸಾಮ್ರಾಜ್ಯದ ಉತ್ತರ ಗಡಿಯಲ್ಲಿ ರೈನ್ ನದಿ. ಜರ್ಮನಿ, ರಷ್ಯ, ವಾಯವ್ಯೋತ್ತರ ಯೂರೋಪಿನ ಜನರೂ ಮೆಸಪೊಟೇಮಿಯಕ್ಕೆ ಪೂರ್ವದಲ್ಲಿದ್ದ ಎಲ್ಲ ಜನರೂ ರೋಮನ್ ಸಾಮ್ರಾಜ್ಯದ ಸೀಮಾರೇಖೆಯಿಂದ ಹೊರಗಿದ್ದರು.

ರೋಮನ್ ಆ ಕಾಲದಲ್ಲಿ ಮಹಾಪದವಿಯನ್ನು ಪಡೆದಿತ್ತು. ಯೂರೋಪಿನ ಅನೇಕ ಜನರಿಗೆ ಇತರ ರಾಜ್ಯಗಳ ಇತಿಹಾಸ ಗೊತ್ತಿರಲಿಲ್ಲವಾಗಿ ಜಗತ್ತಿನ ಆಡಳಿತ ಸೂತ್ರಗಳನ್ನೆಲ್ಲ ರೋಮನ್ ತನ್ನ ಕೈಲಿ ಹಿಡಿದಿತ್ತೆಂದು ಭಾವಿಸಿದರು. ಈ ಭಾವನೆಗೆ ಬುಡವಿರಲಿಲ್ಲ. ಈ ಕಾಲದಲ್ಲಿ - ನಿನಗೆ ಗೊತ್ತಿದೆ - ಚೀನಾದಲ್ಲಿ ಮಹಾ ಹಗ್ ರಾಜ ವಂಶವು ಆಳುತ್ತಿತ್ತು. ಅದರ ಸಾಮ್ರಾಜ್ಯ ಆಸಿಯ ಮೂಲಕ ಕ್ಯಾಸ್ಪಿಯನ್ ಕಡಲವರೆಗೂ ಹಬ್ಬಿತ್ತು. ಮೆಸಿಪೊಟೇಮಿಯದಲ್ಲಿ ಕರ್ಹೆ ಕದನದಲ್ಲಿ ರೋಮ ಕರು ಸೋತರು; ಬಹುಶಃ ಪಾರ್ಥಿಯರಿಗೆ ಮಂಗೋಲಿಯರು ಸಹಾಯಮಾಡಿರ ಬೇಕು.

ರೋಮನ್ ಇತಿಹಾಸ, ಅದರಲ್ಲೂ ರೋಮನ್ ರಿಪಬ್ಲಿಕ್ಕಿನ ಇತಿಹಾಸವೆಂದರೆ ಐರೋಪ್ಯರಿಗೆ ಬಲು ಪ್ರೀತಿ; ಏಕೆಂದರೆ ಇಂದಿನ ಐರೋಪ್ಯ ರಾಷ್ಟ್ರಗಳಿಗೆಲ್ಲ ರೋಮನ್ ಮಹಾರಾಷ್ಟ್ರವೇ ಮೂಲವೆಂದು ಅವರ ಕಲ್ಪನೆ. ಕೊಂಚ ಮಟ್ಟಿಗೆ ಈ ಕಲ್ಪನೆಗೆ ಆಧಾರವೂ ಇದೆ. ಆದಕಾರಣ ಅಂಗ್ಲ ಶಾಲಾಬಾಲಕರಿಗೆ ಇಂದಿನ ಇತಿಹಾಸ ಗೊತ್ತಿರಲಿ ಇಲ್ಲದೆ ಹೋಗಲಿ ಗ್ರೀಸ್, ರೋಮನ್ ಇತಿಹಾಸಗಳನ್ನು ಕಲಿಸುತ್ತಿದ್ದರು. ಗಾಲಿನಲ್ಲಿ ಸೀಜರ್ ದಂಡಯಾತ್ರೆ ಹೂಡಿದ್ದನಷ್ಟೆ, ಅದರ ವಿಚಾರವನ್ನೆಲ್ಲ ಲ್ಯಾಟಿನ್ ಭಾಷೆಯ ಮೂಲಕವಾಗಿ ಬಲವಂತವಾಗಿ ಕಲಿತೆ; ನನಗೆ ಚೆನ್ನಾಗಿ ನೆನಪಿದೆ. ಸೀಜರ್ ಕೇವಲ ಯೋಧನೆಂದು ಭಾವಿಸಬಾರದು; ಶಕ್ತಿ ಯುತನಾಗಿ, ಮನೋಹರವಾಗಿ ಬರೆಯಬಲ್ಲವನು. ಇಂದಿಗೂ ಯೂರೋಪಿನ ಶಾಲೆಗಳಲ್ಲಿ ಸಾವಿರಾರು ಮಂದಿ ಸೀಜರ್ ಬರೆದ 'ಡಿ ಬೆಲೋ ಗ್ಯಾಲಿಕೋ' ಎಂಬ ಗ್ರಂಥವನ್ನು ಓದುತ್ತಾರೆ.

ಅಶೋಕನ ಕಾಲದಲ್ಲಿ ಜಗತ್ತಿನ ಪರಿಸ್ಥಿತಿ ಹೇಗಿತ್ತೆಂಬುದನ್ನು ಗುರುತಿಸಲು ಈಗ ತಾನೆ ಆರಂಭಿಸಿದೆರಲ್ಲವೆ. ನಾವು ಆ ಪರ್ಯಾವಲೋಕನಮಾಡಿ ಸುಮ್ಮನಾಗ ಲಿಲ್ಲ; ಅದನ್ನು ಮೀರಿ ಚೀನ, ಯೂರೋಪು ಪ್ರವೇಶಮಾಡಿದೆವು. ಕ್ರಿಸ್ತ ಶಕಾರಂಭದಲ್ಲಿ ಕಾಲಿಟ್ಟಿದೇವೆ. ಈ ಕಾಲದವರೆಗಿನ ಭಾರತ ನಿವಾಸಿಗಳ ವಿಚಾರ ವನ್ನು ತಿಳಿಯಲು ಮತ್ತೆ ಭಾರತಕ್ಕೆ ಹೋಗಬೇಕು ಅಶೋಕನ ತರುವಾಯ ಭಾರತದಲ್ಲಿ ವಿಶೇಷ ಪರಿವರ್ತನೆಗಳೆಲ್ಲ ಆಗಿಹೋದವು. ಉತ್ತರದಲ್ಲೂ ದಕ್ಷಿಣ ದಲ್ಲೂ ಹೊಸ ಹೊಸ ಚಕ್ರಾಧಿಪತ್ಯ ತಲೆಹಾಕಿದವು.

ಜಗತ್ತಿನ ಇತಿಹಾಸವನ್ನೆಲ್ಲ ಏಕಧಾರೆ ಏಕಧಾಟಿಯಲ್ಲಿ ನಿನಗೆ ತಿಳಿಸಿದೇನೆ; ಅಖಂಡ ಸ್ವರೂಪವನ್ನು ಮುಂದಿಟ್ಟಿದೇನೆ. ಪ್ರಾಚೀನ ಕಾಲದಲ್ಲಿ ಒಂದು ರಾಷ್ಟ್ರಕ್ಕೂ ಮತ್ತೊಂದು ರಾಷ್ಟ್ರಕ್ಕೂ ಹೆಚ್ಚು ಬಾಂಧವ್ಯವಿರಲಿಲ್ಲ. ಅನೇಕ ವಿಚಾರಗಳಲ್ಲಿ ರೋಮನ್ ಮುಂದೆ ಬಂದಿತ್ತು: ಆದರೆ ಅದಕ್ಕೆ ಭೂಗೋಳವೇ ಗೊತ್ತಿರಲಿಲ್ಲ; ಅದು ನಕ್ಷೆಗಳನ್ನೇ ನೋಡಿರಲಿಲ್ಲ; ಅದನ್ನು ನೋಡಲು ಕಳಿ

ಯಲು ರೋಮ್ ಕೊಂಚವೂ ಪ್ರಯತ್ನಮಾಡಲಿಲ್ಲ. ರೋಮ್ ಸೆನೆಟನಲ್ಲಿ ಕೂತ ಸರ್ವಜ್ಞರು 'ನಾವು ಜಗದರಸರು' ಎಂದು ಹೇಳಿಕೊಂಡರೂ ಇಂದಿನ ಶಾಲಾ ಬಾಲಕ ಬಾಲಕಿಯರಿಗಿಂದು ಗೊತ್ತಿರುವಷ್ಟು ಭೂಗೋಳ ಜ್ಞಾನ ಸಹ ಅವರಿಗೆ ಇರಲಿಲ್ಲ. 'ಜಗತ್ತಿಗೆಲ್ಲ ನಾವು ಅರಸರು' ಎಂದು ರೋಮ್ ನಿವಾಸಿಗಳು ಭಾವಿಸಿದರು. ಸಾವಿರಾರು ಮೈಲಿ ಆಸಿಯಾ ಖಂಡದಲ್ಲಿ ಚೀನಾ ರಾಜ್ಯವಿತ್ತು. "ಜಗತ್ತಿಗೆಲ್ಲ ಒಡೆಯರು ನಾವು" ಎಂದು ಚೀನೀಜನರೂ ಭಾವಿಸಿದರು.

೨೯

# ದಕ್ಷಿಣಾಪಥದ ಮುಂದೆ ಆರ್ಯಾವರ್ತವೆಲ್ಲಿ ?

ಏಪ್ರಿಲ್ ೧೦, ೧೯೫೨

ದೂರದ ಮೂಡಲ ಚೀನದ, ದೂರದ ಪಡುವಲ ರೋಮಿನ ಪ್ರವಾಸ ಮುಗಿಸಿ ಭಾರತಕ್ಕೆ ಹಿಂತಿರುಗೋಣ.

ಅಶೋಕನ ಮರಣಾನಂತರ ಮೌರ್ಯ ಸಾಮ್ರಾಜ್ಯ ಬಹಳಕಾಲ ಬಾಳಲಿಲ್ಲ. ಕೆಲವು ವರ್ಷದೊಳಗೆ ನಾಮಾವಶೇಷವಾಯಿತು. ಉತ್ತರ ಪ್ರಾಂತಗಳು ಪ್ರತ್ಯೇಕವಾದವು; ದಕ್ಷಿಣದಲ್ಲಿ ಹೊಸದಾಗಿ ಆಂಧ್ರರಾಷ್ಟ್ರ ಅವತರಿಸಿತು. ಅಶೋಕನ ಅನಂತರ ಐವತ್ತು ವರ್ಷ ಕಾಲ ಅವನ ವಂಶೀಯರು ಖಿಲವಾಗುತ್ತಿದ್ದ ಸಾಮ್ರಾಜ್ಯವನ್ನು ಆಳಲು ಪ್ರಯತ್ನಪಟ್ಟರು. ಬ್ರಾಹ್ಮಣ ದಂಡನಾಯಕ ಪುಷ್ಯಮಿತ್ರ ಅವರನ್ನು ಮೂಲೆಗೆ ಕೂಡಿಸಿದ. ತಾನೇ ಪಟ್ಟಕ್ಕೆ ಬಂದ. ಆತನ ಕಾಲದಲ್ಲಿ ಬ್ರಾಹ್ಮಣ ಧರ್ಮದ ಪುನರುಜ್ಜೀವನವಾಯಿತು. ಕೊಂಚ ಮಟ್ಟಿಗೆ ಬೌದ್ಧ ಸನ್ಯಾಸಿಗಳಿಗೆ ಹಿಂಸೆಯೂ ನಡೆಯಿತು. ಭಾರತ ಇತಿಹಾಸ ಓದುವಾಗ ನಿನಗೆ ತಿಳಿದೀತು: ಬೌದ್ಧಮತವನ್ನು ಬಹು ಸೂಕ್ಷ್ಮರೀತಿಯಿಂದ ಬ್ರಾಹ್ಮಣ ಧರ್ಮ ನಾಶಮಾಡಿತು. ಬ್ರಾಹ್ಮಣ ಧರ್ಮ ಅನಾಗರಿಕ ರೀತಿಯಿಂದ ಬುದ್ಧ ಮತ ವಿರೋಧವನ್ನು ತೋರಿಸಲಿಲ್ಲ. ಹಿಂಸೆಯೇನೋ ಕೊಂಚ ನಡೆಯಿತಾದರೂ ಅದು ರಾಜಕೀಯವೇ ಹೊರತು ಧಾರ್ಮಿಕವಲ್ಲ. ಮಹಾಬುದ್ಧ ಸಂಘಗಳ ಪ್ರಾಬಲ್ಯವೇ ಪ್ರಾಬಲ್ಯ. ಅವುಗಳ ರಾಜಕೀಯ ಬಲವನ್ನು ಕಂಡು ಅರಸರಿಗೆ ಭಯವಾಗಿತ್ತು. ಆದಕಾರಣ ಆ ಸಂಘಗಳನ್ನು ಮಟ್ಟಹಾಕುವ ಆಸಕ್ತಿ ಅವರಿಗೆ ಹುಟ್ಟಿತು. ಬ್ರಾಹ್ಮಣಧರ್ಮ ಬೌದ್ಧಧರ್ಮವನ್ನು ತವರುಮನೆಯಿಂದ ಹೊರಗೋಡಿಸಿತು; ತಕ್ಕಮಟ್ಟಿಗೆ ಅದನ್ನು ಜೀರ್ಣಿಸಿಕೊಂಡೂ ಬಿಟ್ಟಿತು; ತನ್ನ ಮನೆಯೊಳಗೆ ಅದಕ್ಕೂ ಕೊಂಚ ವಸತಿ ಕೊಟ್ಟಿತು.

ಹೊಸ ಬ್ರಾಹ್ಮಣಧರ್ಮ ಹಿಂದಿನ ಕಾಲದ ದಾರಿಯನ್ನೇ ಹಿಡಿಯಲಿಲ್ಲ; ಬೌದ್ಧಧರ್ಮ ಸ್ಥಾಪಿಸಿದ್ದೆಲ್ಲವನ್ನೂ ನಿರ್ಮೂಲನಮಾಡಲು ಹೊರಡಲಿಲ್ಲ. ಬ್ರಾಹ್ಮಣ ಧರ್ಮ ಪ್ರಮುಖರು ಬಹಳ ಚತುರರು; ಹಿಂದಿನ ಕಾಲದಿಂದಲೂ 'ವಾತಾಪಿ ಜೀರ್ಣೋಭವ' ಎಂಬುದವರ ಆಚಾರ. ಆರ್ಯರು ಮೊದಲು ಭಾರತಕ್ಕೆ ಬಂದಾಗ ದ್ರಾವಿಡ ಸಂಸ್ಕೃತಿ ಸಂಪ್ರದಾಯಗಳನ್ನೆಲ್ಲ ಜೀರ್ಣಿಸಿಕೊಂಡರು. ಇತಿಹಾಸವನ್ನು ತೆಗೆದು ನೋಡು. ಕೊನೆಯಿಂದ ಮೊದಲವರೆಗೂ ಹೀಗೆಯೇ ತಿಳಿದೋ ತಿಳಿಯದೆಯೋ ಎಲ್ಲವನ್ನು ತಮ್ಮ ಗರ್ಭವಾಸಕ್ಕೆ ಸೇರಿಸಿಕೊಳ್ಳುವ ಅವರ ಚಾಳಿ ಗೊತ್ತಾಗುತ್ತದೆ. ತಮ್ಮ ದೇವಗಣಕ್ಕೆ ಬುದ್ಧನನ್ನು ಸೇರಿಸಿಕೊಂಡು ಬಿಟ್ಟರು; ಬುದ್ಧನನ್ನು ವಿಷ್ಣುವಿನ ಅವತಾರಗಳಲ್ಲೊಂದೆಂದು ಅಂಗೀಕರಿಸಿದರು. ಬುದ್ಧನೊಬ್ಬ ಮಹಾವ್ಯಕ್ತಿಯೆನಿಸಿದ. ಪಾಮರರು ಅವನನ್ನು ಪೂಜಿಸತೊಡಗಿದರು. ಅವನ ಸಂದೇಶ ಮಾತ್ರ ಮೂಲೆಗೆ ಬಿತ್ತು. ಬ್ರಾಹ್ಮಣಧರ್ಮ ಅಥವಾ ಹಿಂದೂಧರ್ಮ ನಿರುಪದ್ರವವಾಗಿ ಸಾಗಿ ಬಂತು. ಬುದ್ಧಧರ್ಮವನ್ನು ಬ್ರಾಹ್ಮಣ ಧರ್ಮವರ್ತುಲಕ್ಕೊಯ್ಯುವ ವ್ಯಾಪಾರ ದೀರ್ಘಕಾಲ ನಡೆಯಿತು. ಅಶೋಕನ ತರುವಾಯ ಬುದ್ಧಧರ್ಮ ಭರತಖಂಡದಲ್ಲಿ ಬಹಳ ಕಾಲದವರೆಗೆ ಇತ್ತೆಂಬುದನ್ನು ಮುಂದೆ ನಮಗೆ ತಿಳಿಯುತ್ತದೆ.

ಮಗಧ ರಾಜ್ಯದಲ್ಲಿ ಒಂದರ ಹಿಂದೊಂದು ಎದ್ದ ರಾಜವಂಶಗಳ ತಾಪತ್ರಯವೇ ಬೇಡ. ಅಶೋಕನ ತರುವಾಯ ಇನ್ನೂರು ವರ್ಷದಮೇಲೆ ಮಗಧ ರಾಜ್ಯದ ಮಹತ್ತು ಕರಗಿತು. ಆ ಮೇಲೆಯೂ ಬುದ್ಧಸಂಸ್ಕೃತಿಯ ತೀರ್ಥಕ್ಷೇತ್ರವಾಗಿ ಉಳಿದಿತ್ತು.

ಈ ಮಧ್ಯೆ ಉತ್ತರದಲ್ಲೂ ದಕ್ಷಿಣದಲ್ಲೂ, ಎಷ್ಟೋ ಮಹತ್ತ್ವದ ಸಂಗತಿಗಳು ನಡೆದವು. ಉತ್ತರದಲ್ಲಿ ಮಧ್ಯ ಆಸಿಯದ ಬ್ಯಾಕ್ಟ್ರಿಯರು, ಶಕರು, ಸಿಥಿಯರು, ತುರುಷ್ಕರು, ಕುಶಾನರು ಮೇಲಿಂದ ಮೇಲೆ ಧಾಳಿಮಾಡಿದರು. ಮಧ್ಯ ಆಸಿಯ ನಾನಾ ಕುಲದವರ ಸೂತಿಕಾಗೃಹವೆಂದು ಹಿಂದೆ ನಿನಗೆ ಹೇಳಿದ್ದೆ. ಈ ಜನರು ಆಗಾಗ ಇತಿಹಾಸದಲ್ಲಿ ತಲಹಾಕಿ ಆಸಿಯಾ ಯುರೋಪುಗಳ ಬಹು ಭಾಗವನ್ನು ಆಕ್ರಮಿಸಿದರು. ಕ್ರಿಸ್ತಪೂರ್ವ ೨ ಶತಮಾನಗಳವರೆಗೆ ಭಾರತದ ಮೇಲಿನ ಈ ಧಾಳಿಗಳಿಗೆ ಲೆಕ್ಕವೆ ಇಲ್ಲ. ದಿಗ್ವಿಜಯ, ಕೊಳ್ಳೆಗಳಿಗಾಗಿ ಮಾಡಿದವಲ್ಲ ಈ ಧಾಳಿಗಳು. ಧಾಳಿಗಾರರಿಗೆ ನೆಲಸಲಿಕ್ಕೆ ಒಕ್ಕಲು ಮಾಡಲಿಕ್ಕೆ ಸ್ಥಳ ಬೇಕಾಗಿತ್ತು. ಮಧ್ಯ ಆಸಿಯದ ಜನ ಒಂದು ಕಡೆ ಸ್ಥಿರವಾಗಿ ನೆಲೆಸುವವರಲ್ಲ; ಸ್ಥಳದಿಂದ ಸ್ಥಳಕ್ಕೆ ಸಾಗುತ್ತಿರುವುದು ಅವರ ಲಕ್ಷಣ. ಜನಸಂಖ್ಯೆ ಹೆಚ್ಚಿದಂತೆ ವಸತಿ ಸಾಲದಾಯಿತು. ಸರಿ, ಹೊಸ ಕ್ಷೇತ್ರ ಸಂಪಾದನೆಗೆ ಹೊರಟರು. ಇದಕ್ಕಿಂತ ಬಲವಾದ ಕಾರಣ ಇನ್ನೊಂದುಂಟು. ಮೇಲಿನಿಂದ ಇತರ ಜನರು ಒತ್ತುತ್ತ

ಬಂದರು. ಒಂದು ಕುಲ ಬಂತು, ಅಲ್ಲಿದ್ದ ಕುಲವನ್ನು ಓಡಿಸಿತು. ವಿಧಿಯಿಲ್ಲದೆ ಆ ಜನ ಬೇರೆ ಕಡೆ ಓಡಿ ಹೊಸ ಸೀಮೆ ಹುಡುಕಬೇಕಾಯಿತು. ಭಾರತವನ್ನು ಮುತ್ತಿದ ಆ ಜನರಲ್ಲನೇಕರು ತಾವಿದ್ದ ಕಡೆಯಿಂದ ಓಡಿಸಲ್ಪಟ್ಟು ಆಶ್ರಯಸ್ಥಾನ ಅರಸಿ ಬಂದವರು. ಚೀನಾ ಸಾಮ್ರಾಜ್ಯ ಸಹ ತನಗೆ ಬಲವಿದ್ದಾಗಲೆಲ್ಲ - ಹೂಣರ ಕಾಲದಲ್ಲಿದ್ದಂತೆ - ಈ ತಿರುಗಲು ತಿಪ್ಪಣ್ಣರನ್ನು ದೇಶದಿಂದ ಓಡಿಸುತ್ತಿತ್ತು. ವಿಧಿಯಿಲ್ಲದೆ ಅವರು ಹೊಸ ಹೊಸ ಸೀಮೆ ಹುಡುಕಿಕೊಂಡು ಹೋಗ ಬೇಕಾಯಿತು.

ಮಧ್ಯ ಆಸಿಯದ ಈ ಪರಿವ್ರಾಜಕಕುಲ ಭಾರತವನ್ನು ಸಂಪೂರ್ಣವಾಗಿ ಶತ್ರು ರಾಷ್ಟ್ರವೆಂದು ಭಾವಿಸಲಿಲ್ಲ. ಅವರನ್ನು 'ರೂಕ್ಷ'ರೆಂದು ನಮ್ಮವರು ಕರೆದರು; ಆ ಕಾಲದ ಭಾರತೀಯರಿಗಿದ್ದಷ್ಟು ನಾಗರಿಕತೆ ಅವರಿಗಿರಲಿಲ್ಲವೆಂಬುದು ನಿಜವೆ. ಆದರೆ ಅವರಲ್ಲಿ ಅನೇಕರು ಶ್ರದ್ಧಾಳುಗಳಾದ ಬೌದ್ಧರು. ಬುದ್ಧಧರ್ಮದ ತವರು ಮನೆಯಾದ ಭಾರತದ ಕಡೆ ಅವರ ಹೃದಯ ತಿರುಗಿತು.

ಪುಷ್ಯಮಿತ್ರನ ಕಾಲದಲ್ಲೂ ವಾಯುವ್ಯದಿಕ್ಕಿನಿಂದ ಬ್ಯಾಕ್ಟ್ರಿಯದ ಮಿನಾಂಡರ್ ದಂಡೆತ್ತಿಬಂದ. ಶ್ರದ್ಧಾವಂತ-ಬುದ್ಧಧರ್ಮಿ ಅವನು. ಬ್ಯಾಕ್ಟ್ರಿಯ ಭಾರತದ ಗಡಿಯಲ್ಲಿ ಸೆಲ್ಯೂಕಸನ ಸಾಮ್ರಾಜ್ಯದೊಳಗಿತ್ತು; ಅನಂತರ ಸ್ವತಂತ್ರವಾಯಿತು. ಮಿನಾಂಡರನ ಮುತ್ತಿಗೆಯನ್ನು ಎದುರಿಸಿದ್ದಾಯಿತು; ಆದರೂ ಕಾಬೂಲು, ಸಿಂಧು ಎರಡೂ ಅವನ ಕಯ್ಯಲ್ಲೇ ಉಳಿಯಿತು.

ಅನಂತರ ಶಕರ ಧಾಳಿ. ಶಕರದು ಲೆಕ್ಕವಿಲ್ಲದ ದಂಡು; ಉತ್ತರ ಪಶ್ಚಿಮ ಭಾರತದಲ್ಲೆಲ್ಲ ಹರಡಿದರು. ತುರ್ಕಿಯಲ್ಲಿ ಓಡಾಡುತ್ತಿದ್ದ ಜನರ ಕುಲದವರು ಈ ಶಕರು. ಕಾಲಕ್ರಮದಲ್ಲಿ ಅವರನ್ನು ಅವರು ನೆಲೆಸಿದ್ದ ಕ್ಷೇತ್ರಗಳಿಂದ ಕುಶಾನರೆಂಬ ಜನರು ಓಡಿಸಿದರು. ಶಕರು ಬ್ಯಾಕ್ಟ್ರಿಯ, ಪಾರ್ಥಿಯಗಳನ್ನಾಕ್ರಮಿಸಿದರು; ಕ್ರಮೇಣ ಉತ್ತರ ಭಾರತದಲ್ಲಿ ಹೆಚ್ಚಾಗಿ ಪಂಜಾಬು, ರಾಜಪುತಾನ, ಕಾಥೆವಾಡಗಳಲ್ಲಿ ನೆಲೆಸಿದರು. ಭಾರತ ಅವರನ್ನು ನಾಗರಿಕರನ್ನಾಗಿ ಮಾಡಿತು; ಅವರ ಅನಾಗರಿಕ ರೂಢಿಗಳನ್ನೆಲ್ಲ ಬಿಟ್ಟುಬಿಟ್ಟರು.

ಭಾರತದಲ್ಲಿ ಕೆಲವೆಡೆ ಬ್ಯಾಕ್ಟ್ರಿಯ, ತುರ್ಕಿ ಅರಸರು ಆಳುತ್ತಿದ್ದರೂ ಅದರಿಂದ ಸಮಾಜದಲ್ಲೇನೂ ವ್ಯತ್ಯಾಸವಾಗಲಿಲ್ಲ. ಅವರು ಬೌದ್ಧರು; ಬುದ್ಧಸಂಘ ವ್ಯವಸ್ಥೆಯಂತೆ ನಡೆದುಕೊಂಡರು. ಈ ಸಂಘವ್ಯವಸ್ಥೆಯಾದರೂ ಭಾರತೀಯ ಆರ್ಯರ ಪ್ರಜಾತಂತ್ರ ಪದ್ಧತಿಯನ್ನು ಅವಲಂಬಿಸಿದ್ದು. ಈ ಅರಸರ ಆಳ್ವಿಕೆಯಲ್ಲಿ ಕೇಂದ್ರ ಪ್ರಭುತ್ವವೊಂದು ಇದ್ದರೂ ಸ್ವತಂತ್ರ ಗ್ರಾಮಕೂಟಗಳ ಸಮೂಹವಾಗಿತ್ತು ಭಾರತ. ಈ ಕಾಲದಲ್ಲೂ ತಕ್ಷಶಿಲಾ ಮಥುರಾ ನಗರಗಳು ಬೌದ್ಧಸಂಸ್ಕೃತಿಯ ಮಹಾತೀರ್ಥಗಳೆನಿಸಿ ಚೀನಾ, ಪಶ್ಚಿಮ ಆಸಿಯಾಗಳಿಂದ

ಜನರನ್ನು ಆಕರ್ಷಿಸುತ್ತಲಿದ್ದವು.

ಗಡಿನಾಡಿನಲ್ಲಿ ಮೇಲಿಂದ ಮೇಲಾಗುತ್ತಿದ್ದ ಮುತ್ತಿಗೆಗಳು, ಕೊಂಚ ಕೊಂಚ ವಾಗಿ ಕುಸಿದುಬಿದ್ದ ಪೌರರಾಜ್ಯಾಂಗ ವ್ಯವಸ್ಥೆ, ಇದರಿಂದ ಒಂದು ಫಲವಾಯಿತು: ದಕ್ಷಿಣ ಭಾರತದ ರಾಷ್ಟ್ರಗಳು ಪ್ರಾಚೀನ ಹಿಂದೂ ಆರ್ಯರ ವ್ಯವಸ್ಥೆಯ ನಿಜ ವಾದ ಪ್ರತಿನಿಧಿಗಳೆನಿಸಿದವು. ಹಿಂದೂ ಆರ್ಯಪ್ರಾಬಲ್ಯದ ಕೇಂದ್ರ ದಕ್ಷಿಣಕ್ಕೆ ಸಾಗಿತು. ಈ ಮುತ್ತಿಗೆಗಳಿಂದ ಬಹುಶಃ ಧೀಮಂತರನೇಕರು ದಕ್ಷಿಣ ಭಾರತಕ್ಕೆ ಹೊರಟು ಬಂದಿರಬೇಕು. ಸಾವಿರ ವರ್ಷಗಳ ಅನಂತರ ಮುಸಲ್ಮಾನರು ಭಾರತ ವನ್ನು ಮುತ್ತಿದಾಗಲೂ ಹೀಗೆಯೇ ಆಯಿತು. ಉತ್ತರಕ್ಕಿಂತ ದಕ್ಷಿಣ ಭಾರತದ ಮೇಲೆ ಪರಕೀಯರ ಧಾಳಿ ಕಡಿಮೆ; ಪರಕೀಯರೊಂದಿಗೆ ಸಂಬಂಧವೂ ಕಡಿಮೆ. ಉತ್ತರ ಭಾರತವಾಸಿಗಳಾದ ನಾವೆಲ್ಲ ಹಿಂದೂ ಮುಸ್ಲಿಂ ಮಿಶ್ರ ಸಂಸ್ಕೃತಿ ಯಲ್ಲಿ - ಕೊಂಚ ಪಾಶ್ಚಾತ್ಯ ಸಹ - ಬೆಳೆದವರು. ನಮ್ಮ ಭಾಷೆ ಸಹ - ಹಿಂದಿ, ಹಿಂದೂಸ್ತಾನಿ, ಉರ್ದು ಏನು ಬೇಕಾದರೂ ಅನ್ನಿ - ಮಿಶ್ರಭಾಷೆ. ದಕ್ಷಿಣ ಭಾರತ ಹಾಗಲ್ಲ; ನಿನಗೇ ಗೊತ್ತಿದೆ ಪ್ರಧಾನವಾಗಿ ಹಿಂದೂ, ವೈದಿಕ. ದಕ್ಷಿಣ ಭಾರತ ಸಾವಿರಾರು ವರ್ಷಗಳಿಂದ ಪ್ರಾಚೀನ ಆರ್ಯಸಂಪ್ರದಾಯಗಳನ್ನು ಸಂರಕ್ಷಿಸ ತೊಡಗಿತು. ಆ ಪ್ರಯತ್ನದಲ್ಲಿ ಅದು ಗಡುಸಾದ ಸಮಾಜವನ್ನು ಕಟ್ಟಿತು. ಇಂದಿಗೂ ಆ ಸಮಾಜದ ಅಸಹಿಷ್ಣುತಾ ವೈಲಕ್ಷಣ್ಯವನ್ನು ಕಂಡರೆ ಪರಮಾಶ್ಚರ್ಯ ವಾಗುತ್ತದೆ. ಗೋಡೆಗಳ ಸಹವಾಸಕ್ಕಿಂತ ಭಯಂಕರ ಸಹವಾಸವಿನ್ನಿಲ್ಲ. ಕೆಲವು ಸಂದರ್ಭಗಳಲ್ಲಿ ಹೊರಗಿನ ಕೇಡಿನಿಂದ ಗೋಡೆ ಕಾಪಾಡಬಹುದು; ಬೇಡದವರು ಮೇಲೆ ಬಿದ್ದು ಬಂದಾಗ ಅವರನ್ನು ತಡೆಯಲೂ ಬಹುದು. ಆದರೆ ಗೋಡೆಗಳ ನಡುವೆ ಜೀವ ಬಂದಿಯಾಗುತ್ತದೆ; ಗುಲಾಮನಾಗುತ್ತದೆ. ಸ್ವಾತಂತ್ರ್ಯವನ್ನು ಮಾರಿಕೊಂಡು ಮಡಿಯನ್ನೂ ಶುದ್ಧಿಯನ್ನೂ ಪಡೆಯಬಹುದು. ಎಲ್ಲ ಗೋಡೆ ಗಳ ಮಾತು ಹಾಗಿರಲಿ, ಮನಸ್ಸಿನಲ್ಲಿ ಬೆಳೆಯುವ ಗೋಡೆಗಳಿವೆಯಲ್ಲ, ಅವು ಹಳೆಯ ದುಷ್ಟ ಸಂಪ್ರದಾಯಗಳನ್ನು ಬಿಟ್ಟುಬಿಡಲು ಅವಕಾಶ ಕೊಡವು; ಏಕೆಂದರೆ ಅವು ಹಳೆ ಸಂಪ್ರದಾಯಗಳು. ಹೊಸ ಭಾವನೆಗಳನ್ನು ಅಂಗೀಕರಿಸುವು ದಿಲ್ಲ; ಏಕೆಂದರೆ ಅವು ಹೊಸವು.

ದಕ್ಷಿಣ ಭಾರತದ ಸೇವೆಯುಪಾರ; ಸಾವಿರಾರು ವರ್ಷಗಳ ಪರ್ಯಂತ ಧರ್ಮ, ಕಲೆ, ರಾಜನೀತಿ ಎಲ್ಲದರಲ್ಲೂ ಹಿಂದೂ - ಆರ್ಯಸಂಪ್ರದಾಯವನ್ನು ಸಂರಕ್ಷಣೆ ಮಾಡಿತು. ಪ್ರಾಚೀನ ಕಲಾವೈಭವ ನೋಡಬೇಕಾದರೆ ನೀನು ದಕ್ಷಿಣ ಭಾರತಕ್ಕೆ ಹೋಗಬೇಕು. ರಾಜಕೀಯದ ಬಗ್ಗೆ ಗ್ರೀಕ್ ಮೆಗಾಸ್ತನೀಸನು ಬರೆದಿದ್ದಾನೆ; ದಕ್ಷಿಣ ಭಾರತದ ಮಹಾಜನ ಸಭೆಗಳು, ಗ್ರಾಮಕೂಟಗಳು ಸಿಂಹಾಸನಗಳನ್ನು ಕೂಡ ಅಂಕೆಯಲ್ಲಿಟ್ಟಿದ್ದವಂತೆ.

ಮಗಧದ ಪತನಾನಂತರ ಕಲಾವಿದರೂ, ಶಿಲ್ಪಿಗಳೂ, ಕೈವಾಡದವರೂ, ವಿದ್ವಾಂಸರೂ ದಕ್ಷಿಣ ಭಾರತದ ಕಡೆ ಹೊರಟರು. ದಕ್ಷಿಣಭಾರತ ಯೂರೋಪುಗಳ ಮಧ್ಯೆ ವಿಶೇಷ ವ್ಯಾಪಾರವಾಗುತ್ತಿತ್ತು. ಮುತ್ತು ದಂತ ಚಿನ್ನ ಅಕ್ಕಿ ಮೆಣಸು ನವಿಲು ಕೋತಿಗಳು ಸಹ ದಕ್ಷಿಣ ಭಾರತದಿಂದ ಬೇಬಿಲಾನ್, ಈಜಿಪ್ಟ್, ಗ್ರೀಸುಗಳಿಗೆ ಹೋಗುತ್ತಿದ್ದವು. ರೋಮಿಗೆ ಕೂಡ. ಇದಕ್ಕೂ ಮೊದಲೇ ಚಾಲ್ಡಿಯಾ, ಬೇಬಿಲಾನಿಯಾಗಳಿಗೆ ಮಲೆಯಾಳದಿಂದ ಸಾಗುವಾನಿ ಮರ ಹೋಗುತ್ತಿತ್ತು. ಈ ವ್ಯಾಪಾರವೆಲ್ಲ ನಡೆಯುತ್ತಿದ್ದುದು ಭಾರತದ ನೌಕೆಗಳ ಮೂಲಕ. ಈ ನೌಕೆಗಳನ್ನು ಕಟ್ಟಿದವರು ದ್ರಾವಿಡರು. ಪ್ರಾಚೀನ ಜಗತ್ತಿನಲ್ಲಿ ದಕ್ಷಿಣ ಭಾರತದ ಸ್ಥಾನಬಲವೆಷ್ಟಿತ್ತೋ ಈ ಮಾತು ತಿಳಿಸುತ್ತದೆ. ದಕ್ಷಿಣ ಭಾರತದಲ್ಲಿ ಎಷ್ಟೋ ರೋಮನ್ ನಾಣ್ಯ ದೊರೆತಿವೆ. ನಾನಾಗಲೇ ಹೇಳಿದೆನಲ್ಲ, ಮಲೆಯಾಳ ತೀರದಲ್ಲಿ ಅಲೆಗ್ಸಾಂಡ್ರಿಯಾದ ವಸಾಹತುಗಳೂ, ಅಲೆಗ್ಸಾಂಡ್ರಿಯಾದಲ್ಲಿ ಭಾರತದ ವಸಾಹತುಗಳೂ ಇದ್ದವು.

ಅಶೋಕನ ಮರಣಾನಂತರ ದಕ್ಷಿಣದಲ್ಲಿ ಆಂಧ್ರರಾಜ್ಯ ಬಹು ಬೇಗ ಸ್ವತಂತ್ರವಾಯಿತು. ಈಗ ಆಂಧ್ರವೊಂದು ಕಾಂಗ್ರೆಸ್ ಪ್ರಾಂತ; ಮದರಾಸಿಗೆ ಉತ್ತರದಲ್ಲಿ ಪೂರ್ವಸಮುದ್ರತೀರದಲ್ಲಿ ಹರಡಿದೆ. ಆಂಧ್ರದೇಶದ ಭಾಷೆ ತೆಲುಗು. ಅಶೋಕನ ತರುವಾಯ ಬಹು ಬೇಗ ಆಂಧ್ರರ ಪ್ರಾಬಲ್ಯ ಹರಡಿತು; ದಖನ್ನಿನಲ್ಲಿ ಪೂರ್ವಸಮುದ್ರದಿಂದ ಪಶ್ಚಿಮ ಸಮುದ್ರದವರೆಗೆ ಹಬ್ಬಿತು.

ದಕ್ಷಿಣದಿಂದ ವಸಾಹತುಗಳನ್ನು ಸ್ಥಾಪಿಸುವ ಪ್ರಯತ್ನಗಳಾದವು. ಆ ವಿಚಾರ ಮುಂದೆ ಹೇಳುತ್ತೇನೆ.

ಶಕರ, ಸಿಥಿಯನರ, ಉತ್ತರ ಭಾರತವನ್ನು ಮುತ್ತಿ ನೆಲೆಸಿದ ಇನ್ನೂ ಅನೇಕರ ವಿಚಾರ ತಿಳಿಸಿದ್ದಾಯಿತು. ಅವರೆಲ್ಲ ಭಾರತ ಗರ್ಭದಲ್ಲಿ ಸೇರಿ ಭಾರತದಲ್ಲಿ ಬೆರೆತು ಹೋದರು. ಉತ್ತರ ಭಾರತನಿವಾಸಿಗಳಾದ ನಾವೆಲ್ಲ ಆರ್ಯವಂಶಜರಿದ್ದಂತೆ ಶಕಸಿಥಿಯ ವಂಶಜರೂ ಹೌದು. ಮುಖ್ಯವಾಗಿ ಸುಂದರ ಪುರುಷರೂ ಕ್ಷತ್ರಿಯರೂ ಆದ ರಾಜಪುತ್ರರು, ಕಾಥೆವಾಡದ ವೀರಪುರುಷರೂ ಈ ವಂಶಪರಂಪರೆಗೆ ಸೇರಿದವರು.

## ೩೦

# ಗಡಿನಾಡಿನ ಕುಶಾನರ ಸಾಮ್ರಾಜ್ಯ

ಏಪ್ರೆಲ್ ೧೧, ೧೯೩೨

ಶಕರು, ತುರುಷ್ಕರು ಅನೇಕ ಸಾರಿ ಭಾರತವನ್ನು ಮುತ್ತಿದರೆಂದು ಹಿಂದಿನ ಪತ್ರದಲ್ಲಿ ಬರೆದಿದ್ದೆ. ಬಂಗಾಳಾ ಕೊಲ್ಲಿಯಿಂದ ಅರಬ್ಬೀ ಕಡಲವರೆಗೆ ಹಬ್ಬಿದ ಆಂಧ್ರರಾಷ್ಟ್ರದ ಬಲಾಭಿವೃದ್ಧಿಯನ್ನು ಕುರಿತೂ ಬರೆದೆ. ಶಕರನ್ನು ಕುಶಾನರು ಮುಂದಕ್ಕೊತ್ತಿದರು; ಕೆಲವು ಕಾಲಾನಂತರ ಕುಶಾನರೇ ರಂಗಪ್ರವೇಶ ಮಾಡಿದರು. ಕ್ರಿಸ್ತಶಕ ಒಂದನೇ ಶತಮಾನದಲ್ಲಿ ಭಾರತದ ಗಡಿಯಲ್ಲಿ ರಾಜ್ಯ ಕಟ್ಟಿದರು; ಈ ರಾಜ್ಯ ಕ್ರಮವಾಗಿ ದೊಡ್ಡ ಸಾಮ್ರಾಜ್ಯವಾಯಿತು; ಕಾಶಿಯವರೆಗೂ ಹಬ್ಬಿತು; ದಕ್ಷಿಣದಲ್ಲಿ ವಿಂಧ್ಯಗಿರಿಯನ್ನು ಮುಟ್ಟಿತು; ಉತ್ತರದಲ್ಲಿ ಕಾಷ್‌ಗರ್, ಯಾರಕಂದ್, ಖೋತಾನ್‌ವರೆಗೂ ಹೋಯಿತು. ಪಶ್ಚಿಮದಲ್ಲಿ ಪಾರ್ಥಿಯ, ಪಾರ್ಸಿಸ್ತಾನದ ಮೇರೆಗಳವರೆಗೂ ವಿಸ್ತರಿಸಿತು. ಸಂಯುಕ್ತಪ್ರಾಂತ, ಪಂಜಾಬು, ಕಾಶ್ಮೀರ, ಮಧ್ಯ ಆಸಿಯದ ಬಹುಭಾಗ ಹೀಗೆ ಕುಶಾನ ಪ್ರಭುಗಳ ಆಳ್ವಿಕೆಗೊಳಗಾಗಿತ್ತು. ಈ ಸಾಮ್ರಾಜ್ಯ ಮೂರು ಶತಮಾನ ಕಾಲ ಬೆಳಗಿತು; ದಕ್ಷಿಣದಲ್ಲಿ ಆಂಧ್ರಸಾಮ್ರಾಜ್ಯ ಪ್ರವರ್ಧಮಾನವಾಗಿತ್ತಲ್ಲ, ಅದೇ ಕಾಲ. ಮೊದಲು ಮೊದಲು ಕಾಬೂಲು ಕುಶಾನರ ರಾಜಧಾನಿಯಾಗಿದ್ದಿರಬೇಕು. ಆ ಮೇಲೆ ಪೆಷಾವರ್ ಅಥವಾ ಪುರುಷಪುರಕ್ಕೆ ಬಂತು ರಾಜಧಾನಿ; ಅಲ್ಲಿ ಸ್ಥಿರವಾಗಿ ನಿಂತಿತು.

ಅನೇಕ ವಿಚಾರಗಳಲ್ಲಿ ಕುಶಾನ ಸಾಮ್ರಾಜ್ಯ ಬಹಳ ಮನೋರಂಜಕವಾಗಿದೆ. ಬೌದ್ಧ ಸಾಮ್ರಾಜ್ಯ ಅದು. ಕುಶಾನ ಚಕ್ರವರ್ತಿಗಳಲ್ಲಿ ಹೆಸರಾದ ಕನಿಷ್ಕ ನಿಷ್ಠಾವಂತ ಬೌದ್ಧ ಧರ್ಮಿ. ಪುರುಷಪುರದ ಬಳಿಯಲ್ಲೇ ಬಹು ಕಾಲದವರೆಗೆ ಬೌದ್ಧ ಸಂಸ್ಕೃತಿಯ ಮಹಾತೀರ್ಥವೆನಿಸಿದ್ದ ತಕ್ಷಶಿಲಾ ನಗರವಿತ್ತು. ಮೊದಲೇ ನಿನಗೆ ನಾ ತಿಳಿಸಿದಂತೆ ಕುಶಾನರು ಮಂಗೋಲಿಯನರು; ಆ ಕುಲಕ್ಕೆ ಸಂಬಂಧಪಟ್ಟವರು. ಕುಶಾನರ ರಾಜಧಾನಿಯಿಂದ ಮಂಗೋಲಿಯನರ ಮಾತೃಭೂಮಿಗೆ ಏಕಪ್ರಕಾರವಾಗಿ ಜನ ಹೋಗಿಬರುವುದು ಒಲವಾಗಿತ್ತೆಂದು ಕಾಣುತ್ತದೆ. ಬೌದ್ಧ ತತ್ವಜ್ಞಾನ, ಬೌದ್ಧ ಸಂಸ್ಕೃತಿ ಚೀನಾ ಮಂಗೋಲಿಯಾಗಳಿಗೆ ಹೋಗಿರಬೇಕು. ಹೀಗೆಯೇ ಪಶ್ಚಿಮ ಆಸಿಯಕ್ಕೂ ಬೌದ್ಧಮನೋವಿಚಾರಗಳಿಗೂ ನಿಕಟ ಸಂಬಂಧ ಬಂದಿರಬೇಕು. ಸಿಕಂದರನ ಕಾಲದಿಂದ ಪಶ್ಚಿಮ ಆಸಿಯ ಗ್ರೀಕರ ಆಳ್ವಿಕೆಗೆ ಒಳಗಾಗಿತ್ತು. ಗ್ರೀಕರನೇಕರು ತಮ್ಮ ಸಂಸ್ಕೃತಿಯನ್ನು ಅಲ್ಲಿಗೆ ತಂದರು. ಈ ಗ್ರೀಕ್-ಆಸಿಯಾ ಸಂಸ್ಕೃತಿ ಭಾರತದ ಬುದ್ಧಸಂಸ್ಕೃತಿಯಲ್ಲಿ ಬೆರೆಯಿತು.

ಹೀಗೆ ಚೀನಾ, ಪಶ್ಚಿಮ ಆಸಿಯಗಳೆರಡೂ ಭಾರತದ ಪ್ರಭಾವಕ್ಕೆ ಸಿಕ್ಕಿದವು. ಭಾರತವೂ ಅದೇ ರೀತಿ ಅವುಗಳ ಪ್ರಭಾವಕ್ಕೊಳಗಾಯಿತು. ಪಶ್ಚಿಮದಲ್ಲಿ ಗ್ರೀಕೋ-ರೋಮನ್ ಜಗತ್ತು, ಪೂರ್ವದಲ್ಲಿ ಚೀನಾ ಪ್ರಪಂಚ, ದಕ್ಷಿಣದಲ್ಲಿ ಭಾರತಲೋಕ - ಮಧ್ಯೆ ಆಸಿಯಾದ ಬೆನ್ನಮೇಲೆ ಕುಶಾನ್‌ಸಾಮ್ರಾಜ್ಯ ಪದ್ಮಾಸನ ಹಾಕಿಬಿಟ್ಟಿತು. ಭಾರತ-ರೋಮ್, ಭಾರತ ಚೀನಾಗಳ ನಡುವೆ ಒಂದು ಮಜಲಿನಂತಾಗಿತ್ತು.

ಸ್ಥಾನಬಲದಿಂದ ಕುಶಾನ ಸಾಮ್ರಾಜ್ಯ ಭಾರತಕ್ಕೂ ಚೀನಾಕ್ಕೂ ನಿಕಟ ಬಾಂಧವ್ಯ ಕಾರಣವಾಯಿತು. ರೋಮ್ ಪ್ರಜಾತಂತ್ರದ ಕಡೆಗಾಲದಲ್ಲಿ, ಜೂಲಿಯಸ್ ಸೀಸರ್ ಜೀವಿಸಿದ್ದಾಗ, ರೋಮ್ ಸಾಮ್ರಾಜ್ಯದ ಮೊದಲೆರಡು ಶತಮಾನಗಳ ಕಾಲದಲ್ಲಿತ್ತು ಕುಶಾನ ಸಾಮ್ರಾಜ್ಯ. ಆಗಸ್ಟಸ್ ಸೀಜರನ ಆಸ್ಥಾನಕ್ಕೆ ಕುಶಾನ ಚಕ್ರವರ್ತಿ ಮಹಾರಾಯಭಾರವನ್ನು ಕಳಿಸಿದ್ದನಂತೆ. ನೆಲ ಜಲಗಳೆರಡರ ಮೂಲಕವೂ ಒಳ್ಳೆ ವ್ಯಾಪಾರ ನಡೆದಿತ್ತು. ಭಾರತದಿಂದ ರೋಮಿಗೆ ಎಷ್ಟೋ ವಸ್ತುಗಳು ಹೋಗುತ್ತಿದ್ದವು; ಅವುಗಳಲ್ಲಿ ಪರಿಮಳ ದ್ರವ್ಯ, ಮೆಣಸು, ರೇಶಿಮೆ, ಜರತಾರಿ ಬಟ್ಟೆ, ಮಸ್ಲಿನ್, ಕನಕಾಂಬರ, ವಜ್ರವೈಢೂರ್ಯಗಳೂ ಇದ್ದವು. 'ರೋಮಿನಿಂದ ಭಾರತಕ್ಕೆ ಚಿನ್ನದ ಪ್ರವಾಹ ಹೋಗುತ್ತಿದೆಯಲ್ಲಾ' ಎಂದು ರೋಮಕ ಗ್ರಂಥಕರ್ತ ಪ್ಲಿನಿ ಗೋಳಾಡಿದಾನೆ. ಈ ಭೋಗ್ಯವಸ್ತುಗಳಿಗಾಗಿ ಪ್ರತಿ ವರ್ಷವೂ ರೋಮು ಒಂದು ಕೋಟಿ ಸೆಸ್ಟರ್‌ಸೆಸ್ ಅಂದರೆ ಒಂದೂವರೆ ಕೋಟಿ ರೂಪಾಯಿ ವೆಚ್ಚಮಾಡುತ್ತಿದ್ದಿತಂತೆ.

ಈ ಕಾಲದಲ್ಲಿ ಬುದ್ಧವಿಹಾರಗಳಲ್ಲೂ, ಮಹಾ ಸಂಘಗಳಲ್ಲೂ ಮಹತ್ವದ ಪಾಠಗಳೂ ವ್ಯಾಖ್ಯಾನಗಳೂ ಆಗುತ್ತಿದ್ದವು. ಹೊಸ ಭಾವನೆ, ಹೊಸ ವೇಷದ ಹಳೆಯ ಕಲ್ಪನೆ ತೆಂಕಣ ದೆಸೆಯಿಂದಲೂ ಪಡುವಲು ಕಡೆಯಿಂದಲೂ ಬೀಸಿ ಬಂದವು. ಕ್ರಮವಾಗಿ ಬೌದ್ಧ ಮನೋಧರ್ಮದ ಸರಳತೆಗೆ ಸಂಚಕಾರ ಬಂತು. ಈ ಪರಿವರ್ತನಕ್ರಮ ನಡೆದು ನಡೆದು, ಕೊನೆಗೆ ಬುದ್ಧಧರ್ಮ ಒಡೆದು ಮಹಾಯಾನ ಹೀನಯಾನವೆಂದು ಎರಡು ದಾರಿ ಹಿಡಿಯಿತು. ಹೊಸ ಕಲ್ಪನೆ, ಹೊಸ ಟೀಕೆಗಳಿಂದ ಧರ್ಮದಲ್ಲೂ ಜೀವನ ಪುರುಷಾರ್ಥದಲ್ಲೂ ಬದಲಾವಣೆಗಳುಂಟಾದವು. ಕಲೆ, ವಾಸ್ತುಶಿಲ್ಪದಲ್ಲಿ ಸಹ ಭಾವನೆಗಳ ಕಲ್ಪನೆಗಳ ಪರಿವರ್ತನವುಂಟಾಯಿತು. ಈ ಬದಲಾವಣೆ ಹೇಗೆ ಬಂತೋ ಹೇಳುವುದು ಸುಲಭವಲ್ಲ. ಬ್ರಾಹ್ಮಣ, ಯವನ ಮನೋಧರ್ಮಗಳ ಪರಿಣಾಮವಾಗಿ ಬೌದ್ಧಮನೋಧರ್ಮ ಇಳಿಮುಖವಾಗುತ್ತ ಬಂತು.

ಹಿಂದೆಯೇ ಹೇಳಿದೇನೆ: ಬೌದ್ಧಧರ್ಮ ಹುಟ್ಟಿದುದು ವರ್ಣಾಶ್ರಮ ಧರ್ಮ, ಮಂತ್ರ ತಂತ್ರ, ಪೌರೋಹಿತ್ಯಾದಿಗಳಿಗೆಲ್ಲ ಪ್ರತಿಯಾಗಿ. ಗೌತಮ ಬುದ್ಧ

ವಿಗ್ರಹಾರಾಧನೆಯನ್ನು ಒಪ್ಪಲಿಲ್ಲ. ತಾನು ಆರಾಧನೆಗೆ ಅರ್ಹನಾದ ದೇವರೆಂದು ಆತ ಭಾವಿಸಲಿಲ್ಲ. ಆತ ಜ್ಞಾನಿ, ಬುದ್ಧ. ಈ ಸಿದ್ಧಾಂತದಂತೆ ಬುದ್ಧನನ್ನು ಮೂರ್ತಿಯನ್ನಾಗಿ ಮಾಡಲಿಲ್ಲ; ಆ ಕಾಲದಲ್ಲಿ ವಾಸ್ತುಶಿಲ್ಪದಲ್ಲಿ ವಿಗ್ರಹ ನಿರ್ಮಾಣ ಸಂಪ್ರದಾಯವೇ ಇರಲಿಲ್ಲ. ಬ್ರಾಹ್ಮಣರಿಗೆ ಬುದ್ಧಧರ್ಮಕ್ಕೂ ಹಿಂದೂ ಧರ್ಮಕ್ಕೂ ಮಧ್ಯೆ ಸೇತುಬಂಧನ ಮಾಡುವ ಬಯಕೆ ಇದ್ದೇ ಇತ್ತು. ಆದುದರಿಂದ ಬೌದ್ಧಧರ್ಮದಲ್ಲಿ ಹಿಂದೂ ಭಾವನೆ, ಸಂಕೇತಗಳನ್ನು ಬೆರೆಸುತ್ತ ಬಂದರು. ಗ್ರೀಕ-ರೋಂ ಲೋಕದ ಕುಶಲಮತಿಗಳೂ ದೇವತಾ ವಿಗ್ರಹಗಳನ್ನು ಮಾಡುತ್ತಿದ್ದರು. ಕಾಲಕ್ರಮದಲ್ಲಿ ಬೌದ್ಧ ವಿಹಾರಗಳಿಗೂ ಮೂರ್ತಿಗಳ ಪ್ರವೇಶವಾಯಿತು. ಮೊದಲು ಮೊದಲು ಬುದ್ಧನ ಮೂರ್ತಿ ಬರಲಿಲ್ಲ. ಬುದ್ಧನ ಹಿಂದಿನ ಜನ್ಮಗಳ ಬೋಧಿಸತ್ವ ಪ್ರತಿಮೆಗಳು ಬಂದವು. ಹೀಗೆ ನಡೆಯುತ್ತ ನಡೆಯುತ್ತ ಬುದ್ಧನ ಮೂರ್ತಿಗಳೂ ಬಂದವು; ಅವುಗಳ ಪೂಜೆಯೂ ಮೊದಲಾಯಿತು.

ಬೌದ್ಧಧರ್ಮದ ಮಹಾಯಾನ ಪಂಥವು ಈ ಬದಲಾವಣೆಗಳನ್ನೊಪ್ಪಿತು. ಇದೆಲ್ಲವೂ ಬ್ರಾಹ್ಮಣ ವಿಚಾರಮಾರ್ಗಕ್ಕೆ ಸಮೀಪ. ಕುಶಾನರು ಮಹಾಯಾನವನ್ನಂಗೀಕರಿಸಿ ಅದನ್ನು ಹರಡಿದರು. ಆದರೆ ಹೀನಯಾನವೆಂದರಾಗಲಿ ಇತರ ಧರ್ಮಗಳೆಂದರಾಗಲಿ ಅಸಹನೆ ಇರಲಿಲ್ಲ. ಜೊರಾಸ್ಟ್ರ ಧರ್ಮಕ್ಕೂ ಕನಿಷ್ಕ ಪ್ರೋತ್ಸಾಹ ಕೊಟ್ಟನೆಂದು ಹೇಳುತ್ತಾರೆ.

ಹೀನಯಾನ ಮಹಾಯಾನಗಳನ್ನು ಕುರಿತು, ಅವುಗಳ ಗುಣಾವಗುಣಗಳನ್ನು ಕುರಿತು ಮಹಾವಾದ ವಿವಾದಗಳಾಗುತ್ತಿದ್ದವು; ವಿದ್ವಾಂಸರು ಇದರಲ್ಲಿ ಭಾಗ ವಹಿಸುತ್ತಿದ್ದರು. ಅದನ್ನೆಲ್ಲ ಓದಿದರೆ ಸ್ವಾರಸ್ಯವಾಗಿರುತ್ತದೆ. ಇದಕ್ಕಾಗಿ ಮಹಾ ಸಂಘಗಳು ಸೇರುತ್ತಿದ್ದವು. ಕನಿಷ್ಕ ಮಹಾಸಂಘವೊಂದನ್ನು ಕಾಶ್ಮೀರದಲ್ಲಿ ಸೇರಿಸಿದ್ದ. ಈ ವಾದ ವಿವಾದ ನೂರಾರು ವರ್ಷಕಾಲ ನಡೆಯಿತು. ಉತ್ತರ ಭಾರತದಲ್ಲಿ ಮಹಾಯಾನ ವಾದ ಗೆದ್ದಿತು; ದಕ್ಷಿಣ ಭಾರತದಲ್ಲಿ ಹೀನಯಾನ ಗೆದ್ದಿತು. ಎರಡನ್ನೂ ಹಿಂದೂಧರ್ಮ ಜೀರ್ಣಿಸಿಕೊಂಡು ಬಿಟ್ಟಿತು. ಇಂದು ಚೀನಾ, ಜಪಾನ್, ಟಿಬೆಟ್‌ಗಳಲ್ಲಿ ಮಹಾಯಾನ ಬೌದ್ಧಧರ್ಮವಿದೆ. ಸಿಂಹಳ, ಬರ್ಮಾಗಳಲ್ಲಿ ಹೀನಯಾನವಿದೆ.

ಕಲೆಯು ಆಯಾ ಜನಾಂಗದ ಮನೋಧರ್ಮದ ಕನ್ನಡಿ. ಪ್ರಾಚೀನ ಬೌದ್ಧ ಧರ್ಮದ ವಿಚಾರ ವಿಸ್ತಾರವಾದ ಯಂತ್ರ ತಂತ್ರ ಸಂಕೇತಗಳಿಗೆ ಸ್ಥಳ ಕೊಟ್ಟಿತು. ಭಾರತೀಯ ಕಲೆಯೂ ವಿಪರೀತ ವಿಸ್ತಾರವಾಗುತ್ತ ಬಂತು; ಅಲಂಕಾರ ಭಾರ ಹೆಚ್ಚಿತು. ವಾಯುವ್ಯದಲ್ಲಿ-ಗಾಂಧಾರದಲ್ಲಿ ಮಹಾಯಾನ ಮಾರ್ಗದ ವಾಸ್ತುಶಿಲ್ಪವು ಅಲಂಕಾರದಿಂದ, ಮೂರ್ತಿಗಳಿಂದ ತುಂಬಿಹೋಯಿತು. ಹೀನಯಾನ ಶಿಲ್ಪವೂ ಸಹ ಈ ಅಲಂಕಾರ ಚಾಪಲ್ಯಕ್ಕೆ ಒಳಗಾಯಿತು. ಆದರ ಮೊದಲಿನ

ಸರಳ ಗಾಂಭೀರ್ಯ ಹೋಯಿತು. ಸಂಕೇತವೂ ಅಲಂಕಾರವೂ ಬಲವಾಯಿತು.

ಈ ಕಾಲದ ಹಲವು ಸ್ಮಾರಕಗಳಿನ್ನೂ ಇವೆ. ಅವುಗಳಲ್ಲೆಲ್ಲ ಅಜಂತಾ ಚಿತ್ರಶಾಲೆ ಬಹು ಸುಂದರವಾದುದು.

ಇನ್ನು ಕುಶಾನರಿಗೆ ಕೈಮುಗಿದುಹೋಣ. ಇದನ್ನು ಮಾತ್ರ ಮರೆಯಬೇಡ; ಶಕ ತುರುಷ್ಕರಂತೆ ಕುಶಾನರು ಭಾರತಕ್ಕೆ ಬಂದವರಲ್ಲ; ಪರದೇಶಿಗಳು ರಾಜ್ಯವನ್ನು ಗೆದ್ದು ಆಳುವಂತೆ ಆಳಿದವರಲ್ಲ. ಭಾರತವನ್ನೂ ಅವರನ್ನೂ ಧರ್ಮರಜ್ಜು ಬಂಧಿಸಿತು ಅಲ್ಲದೆ ಇವರು ಭಾರತದ ಆರ್ಯಮಾರ್ಗದ ಆಡಳಿತ ವಿಧಾನಗಳನ್ನು ಅಂಗೀಕರಿಸಿದರು, ಆಚರಣೆಗೆ ತಂದರು. ಆರ್ಯಮಾರ್ಗಕ್ಕೆ ಬಹಳಮಟ್ಟಿಗೆ ಹೊಂದಿಕೊಂಡದ್ದರಿಂದ ಉತ್ತರ ಭಾರತದಲ್ಲಿ ಸುಮಾರು ೩೦೦ ವರ್ಷ ಇವರು ರಾಜ್ಯಭಾರ ಮಾಡಿದರು.

## ೩೧

# ಯೇಸು; ಕ್ರಿಸ್ತಾನ ಮತ

ಏಪ್ರಿಲ್ ೧೨, ೧೯೩೨

ಭಾರತದ ವಾಯುವ್ಯ ಸೀಮೆಯ ಕುಷಾನ್ ರಾಜ್ಯವೂ ಚೀನಾದೇಶದ ಹಾನ್ ವಂಶವೂ ನಮ್ಮ ಇತಿಹಾಸದ ಒಂದು ಹೆಗ್ಗುರುತಿನಿಂದ ಮುಂದೆ ನಮ್ಮನ್ನು ಒಯ್ಯುತ್ತವೆ. ಇಲ್ಲಿಯ ತನಕ ಕ್ರಿ. ಪೂ. – ಕ್ರಿಸ್ತಪೂರ್ವ – ಎಂದು ಕಾಲವನ್ನು ಸೂಚಿಸುತ್ತಿದೇವೆ. ಈಗ ನಾವು ಇರುವ ಕಾಲ ಕ್ರಿಸ್ತಶಕ – ಕ್ರಿ. ಶ. ಕ್ರಿಸ್ತಶಕ ಎಂದರೆ ಕ್ರಿಸ್ತನ ಕಾಲದಿಂದ ಪ್ರಾರಂಭವಾದದ್ದು, ಕ್ರಿಸ್ತನ ಜನ್ಮಕಾಲವೆಂದು ತಿಳಿದುಕೊಂಡ ಸಮಯದಿಂದ ಪ್ರಾರಂಭವಾದದ್ದು. ನಿಜವಾಗಿ ಈ ಶಕಾರಂಭಕ್ಕೆ ನಾಲ್ಕು ವರ್ಷ ಮೊದಲೆ ಕ್ರಿಸ್ತ ಹುಟ್ಟಿರಬಹುದು. ಆದರಿಂದೇನೂ ವ್ಯತ್ಯಾಸವಿಲ್ಲ.

ಕ್ರಿಸ್ತನ ಹೆಸರು ಯೇಸು. ಬೈಬಲಿನಲ್ಲಿ ಯೇಸುವಿನ ಕತೆಯಿದೆ. ನಿನಗೆ ಸ್ವಲ್ಪ ಗೊತ್ತಿರಬೇಕು ಆ ಕತೆ. ಆ ಸುವಾರ್ತೆಗಳಲ್ಲಿ ಯೇಸುವಿನ ಹರೆಯದ ಸುದ್ದಿ ಇಲ್ಲ. ನಾಜರೆತ್‌ನಲ್ಲಿ ಹುಟ್ಟಿದ, ಗೆಲಿಲೀಯಲ್ಲಿ ಉಪದೇಶ ಮಾಡಿದ, ಮೂವತ್ತು ವರುಷ ವಯಸ್ಸಿಗೆ ಜೆರೂಸಲೆಂಗೆ ಬಂದ. ಮುಂದೆ ಕೆಲವು ದಿನದಲ್ಲೆ ರೋಮನ್ ಮಂಡಲಾಧಿಕಾರಿ ಪಾಂಟಿಯುಸ್ ಪೈಲೆಟ್‌ನ ಕೈಯಲ್ಲಿ ಶಿಕ್ಷೆಗೆ ಗುರಿಯಾದ. ಉಪದೇಶ ಮಾಡುವ ಮೊದಲು ಯೇಸು ಎಲ್ಲಿಗೆ ಹೋಗಿದ್ದನೊ, ಏನು ಮಾಡಿದನೊ ಗೊತ್ತಾಗುವುದಿಲ್ಲ. ಮಧ್ಯ ಏಸಿಯಾದಲ್ಲಿ, ಕಾಶ್ಮೀರ, ಲಡಾಕ್, ತಿಬೆಟ್ಟುಗಳಲ್ಲಿ, ಇನ್ನೂ ಉತ್ತರದಲ್ಲೂ, ಯೇಸು ಆ ಭಾಗದಲ್ಲೆಲ್ಲ ತಿರುಗಾಡಿದನೆಂದು ಈಗಲೂ

ಬಲವಾಗಿ ನಂಬುತ್ತಾರೆ. ಹಿಂದುಸ್ಥಾನಕ್ಕೂ ಬಂದಿದ್ದನೆಂದು ಕೆಲವರು ನಂಬುತ್ತಾರೆ. ಯಾವ ಮಾತನ್ನೂ ದೃಢವಾಗಿ ಹೇಳುವಂತಿಲ್ಲ. ಯೇಸುವಿನ ಇತಿಹಾಸವನ್ನು ಅಭ್ಯಾಸ ಮಾಡಿದವರು ಹಿಂದುಸ್ಥಾನಕ್ಕಾಗಲಿ ಮಧ್ಯ ಏಸಿಯಾಕ್ಕಾಗಲಿ ಬಂದಿರಲಿಲ್ಲವೆನ್ನುತ್ತಾರೆ. ಬಂದಿದ್ದ ಎಂದರೆ ಅಂಥ ಅಸಂಭವವಾದ ವಿಷಯವೂ ಅಲ್ಲ. ಆ ಕಾಲದಲ್ಲಿ ಹಿಂದುಸ್ಥಾನದ ವಿದ್ಯಾಲಯಗಳ ಕೀರ್ತಿ – ವಾಯುವ್ಯದಲ್ಲಿದ್ದ ತಕ್ಷಶಿಲೆಯ ಕೀರ್ತಿ – ಬಲು ದೂರ ಹರಡಿ ವಿದ್ಯಾತುರರನ್ನು ದೂರ ದೇಶಗಳಿಂದ ಬರ ಸೆಳೆಯುತ್ತಿತ್ತು. ಜ್ಞಾನ ಸಂಪಾದನೆಗಾಗಿ ಯೇಸುವೂ ಬಂದಿದ್ದಿರಬಹುದು. ಗೌತಮನ ಉಪದೇಶಕ್ಕೂ ಯೇಸುವಿನ ಉಪದೇಶಕ್ಕೂ ಬಹಳ ಹೋಲಿಕೆಯಿದೆ. ಈ ಸಿದ್ಧಾಂತ ಯೇಸುವಿಗೆ ಚೆನ್ನಾಗಿ ಗೊತ್ತಿತ್ತು ಎನ್ನುವ ಹಾಗೆ ಇದೆ. ಬೌದ್ಧಧರ್ಮ ಪರದೇಶಗಳಲ್ಲೂ ಚೆನ್ನಾಗಿ ಹರಡಿತ್ತಷ್ಟೆ. ಹಿಂದುಸ್ಥಾನಕ್ಕೆ ಬಾರದೆ ಅಲ್ಲೆ ಅದನ್ನು ತಿಳಿದುಕೊಂಡಿದ್ದರಲೂ ಬಹುದು ಯೇಸು.

ಓದುವ ಹುಡುಗಿಯರಿಗೆಲ್ಲ ಗೊತ್ತಿದೆ: ಮತ ಎಂದರೆ ಜಗಳಕ್ಕೆ ದ್ವೇಷಕ್ಕೆ ಕಾರಣ. ಆದರೆ ಈ ಧರ್ಮಗಳು ಹುಟ್ಟಿದ ರೀತಿಯನ್ನು ನೋಡಿದರೆ, ಒಂದಕ್ಕೊಂದು ಹೋಲಿಸಿದರೆ ಬಲು ಸೋಜಿಗ ಕಾಣುತ್ತದೆ. ಮನೋಭಾವದಲ್ಲಿ ಸಿದ್ಧಾಂತದಲ್ಲಿ ಬಹುಮಟ್ಟಿಗೆ ಎಲ್ಲವೂ ಒಂದೇ ವಿಧ. ಆದರೂ ಚಿಲ್ಲರೆ ಮಾತಿಗಾಗಿ ತೌಡು ಹೊಟ್ಟಿಗಾಗಿ ಜನ ಜಗಳವಾಡುತ್ತಾರಲ್ಲ! ಈ ಮೂರ್ಖತನವೇಕೊ ಜನಕ್ಕೆ? ಇನ್ನೂ ಒಂದು: ಮೊದಲಿನ ಸಿದ್ಧಾಂತಕ್ಕೆ ಮನಸಿಗೆ ಬಂದದ್ದೆಲ್ಲ ಸೇರಿಸಿ ವಿಕಾರಗೊಳಿಸಿ, ಮೂಲವು ಗುರುತು ಸಿಗದಂತೆ ರೂಪುಗೆಡಿಸುತ್ತಾರೆ; ನಿಜವಾದ ಗುರುವಿನ ಸ್ಥಾನದಲ್ಲಿ ಕೀಳುಮನದ ಕಂಟಕರು, ಸಹನೆಯಿಲ್ಲದ ಸಂಪ್ರದಾಯ ಶರಣರು ಬಂದುನಿಂತರು. ರಾಜಕೀಯಕ್ಕೆ, ಸಾರ್ವಭೌಮತ್ವದ ಏರ್ಪಾಡಿಗೆ ಪದೇ ಪದೇ ತಲೆಬಾಗಿ ತೊತ್ತಾಗಿ ನಡೆದಿದೆ ಧರ್ಮ. ಜನರ ಹಿತಕ್ಕಾಗಿ ಅಲ್ಲ, ಅವರನ್ನು ಸುಲಿಗೆಮಾಡಲಿಕ್ಕಾಗಿ ಮೂಢ ವಿಶ್ವಾಸವನ್ನು ಬೆಳೆಸುವುದು ರೋಮನರ ಪದ್ಧತಿಯಾಗಿತ್ತು. ವಿಶ್ವಾಸಮೂಢರನ್ನು ನಿಗ್ರಹಿಸುವುದು, ಆಳುವುದು ಸುಲಭವಲ್ಲವೆ. ರೋಮನ್ ನಾಯಕರು ತತ್ವಶಾಸ್ತ್ರಗಳಲ್ಲೂ ಸ್ವಲ್ಪ ರುಚಿ ತೋರಿಸುತ್ತಿದ್ದರು. ಆದರೆ ಅವರಿಗೆ ಪಥ್ಯವಾದದ್ದು ಜನಕ್ಕೆ ಪಥ್ಯವಲ್ಲ, ಹಿತವಲ್ಲ. ಕೆಲವು ಕಾಲದಮೇಲೆ ಹೆಸರಾದ ಇಟಲಿ ದೇಶದ ಮ್ಯಾಕಿವೆಲ್ಲಿ ತನ್ನ ರಾಜನೀತಿ ಶಾಸ್ತ್ರದಲ್ಲಿ ಹೀಗೆ ಬರೆದಿದಾನೆ: ರಾಜ್ಯಭಾರ ನಡಸಲು ಧರ್ಮ ಪ್ರಚಾರ ಆಗತ್ಯ; ಸುಳ್ಳೆಂದು ತನಗೆ ಗೊತ್ತಿದ್ದ ಧರ್ಮವನ್ನೆ ದೊರೆ ಪ್ರೋತ್ಸಾಹಿಸಬೇಕು, ಆವನ ಕರ್ತವ್ಯ ಅದು. ಇತ್ತೀಚೆಗೆ ಕೂಡ ಧರ್ಮದ ಹೆಸರಿನಲ್ಲಿ ಸಾಮ್ರಾಜ್ಯವನ್ನು ಭದ್ರಮಾಡಿಕೊಂಡ ಸಂದರ್ಭ ಎಷ್ಟೋ ಆಗಿವೆ. ಆದ್ದರಿಂದಲೆ

'ಧರ್ಮ-ಜನಕ್ಕೆ ಕುಡಿಸಿದ ಭಂಗು' ಎಂದು ಕಾರ್ಲ್‌ಮಾರ್ಕ್ಸ್ ಹೇಳಿದ್ದು ಏನೂ ಆಶ್ಚರ್ಯವಲ್ಲ.

ಯೇಸು ಯಹೂದ್ಯರ ಜಾತಿ. ಯಹೂದ್ಯರ ಜನ ಒಳ್ಳೆ ಛಲಗಾರರು, ವಿಲಕ್ಷಣವಾದ ಜಾತಿ. ದಾವೀದ್, ಸಾಲೊಮನ್ನರ ಕಾಲದಲ್ಲಿ ಕೆಲವು ದಿನ ಅವರ ವೈಭವ ಬೆಳಗಿತು. ಅಮೇಲೆ ಕಷ್ಟಕಾಲ ಬಂತು. ಆ ವೈಭವ ಕೂಡ ಅಷ್ಟು ವಿಶೇಷವಾಗಿರಲಿಲ್ಲ. ಅವರು ಮಾತ್ರ ಅದಕ್ಕೆ ಕಲ್ಪನೆ ಬೆರಸಿ ದೊಡ್ಡದು ಮಾಡಿ ಅದೊಂದು ಸುವರ್ಣ ಯುಗ, ಮತ್ತೆ ಆ ಕಾಲ ಬರಲಿದೆ, ಆಗ ಯಹೂದ್ಯರಿಗೆ ಮತ್ತೆ ದೆಸೆ ಬರುತ್ತದೆ ಎಂದು ನಂಬಿದಾರೆ. ರೋಮನ್ ಸಾಮ್ರಾಜ್ಯದಲ್ಲೂ ಬೇರೆ ಸೀಮೆಯಲ್ಲೂ ವ್ಯಾಪಿಸಿ ಚೆದರಿ ಹೋಗಿದ್ದರೂ ತಮ್ಮ ದಶಾಕಾಲ ಬರಲಿದೆ, ಜಗದ್ರಕ್ಷಕನೊಬ್ಬ ಅವತರಿಸಿ ಆ ಯುಗಾರಂಭ ಮಾಡುತ್ತಾನೆ ಎಂಬ ನಂಬಿಗೆ ಅವರನ್ನು ಒಟ್ಟಿಗೆ ಹೆಣೆದಿತ್ತು. ತಮ್ಮದೆಂಬ ದೇಶವಿಲ್ಲ, ಆಸರೆಗೊಂದು ಸೀಮೆಯಿಲ್ಲ; ಅವರು ಪಟ್ಟ ಪಾಡು, ಜನ ಕೊಟ್ಟ ಹಿಂಸೆ ಅಷ್ಟಿಷ್ಟಲ್ಲ; ಚಿತ್ರಹಿಂಸೆ, ಸಾವು ಕೂಡ ತಪ್ಪಲಿಲ್ಲ, ಇಷ್ಟಾದರೂ ಈ ೨೦೦೦ ವರ್ಷದಿಂದ ತಮ್ಮ ವ್ಯಕ್ತಿತ್ವ ಉಳಿಸಿಕೊಂಡು ಜನವೆಲ್ಲ ಒಕ್ಕಟ್ಟಾಗಿ ಬಂದಿದಾರೆ, ಯಹೂದ್ಯರು. ಇತಿಹಾಸದಲ್ಲೆ ಇದೊಂದು ಆಶ್ಚರ್ಯದ ವಿಷಯ!

ಜಗದ್ಗುರುವಿನ ಅವತಾರವನ್ನು ನಂಬಿದ ಯಹೂದ್ಯರು ಯೇಸುವೆ ಆ ಅವತಾರವಾದಾನೆಂದು ನಿರೀಕ್ಷಿಸಿದರು. ಅವರ ಆಸೆ ಬೇಗನೆ ಬಯಲಾಯಿತು. ಯೇಸು ಆಡಿದ ಮಾತು ಬೇರೆಯಾಯಿತು. ಆಗ ಇದ್ದ ಸಮಾಜದ ಮೇಲೆ ಕ್ರಾಂತಿಯ ಕೊಡಲಿಯನ್ನೇ ಎತ್ತಿದ. ಧರ್ಮವನ್ನು ಬರೀ ಸಂಪ್ರದಾಯ, ಆಚಾರವಾಗಿ ಮಾಡಿಟ್ಟ ಹಣವಂತರ, ಕಪಟಿಗಳ ಮೇಲಂತೂ ಬಲವಾಗಿ ಗದೆಯೆತ್ತಿದ. ಅಷ್ಟೈಶ್ವರ್ಯ – ಸ್ವರ್ಗಸೌಖ್ಯ ಕೊಡಿಸುವ ಮಾತಿರಲಿ, ಕತೆಯ ಸ್ವರ್ಗಕ್ಕಾಗಿ, ಕನಸಿನ ಕೈಲಾಸಕ್ಕಾಗಿ, ಇದ್ದದ್ದನ್ನೂ ಬಿಟ್ಟುಬಿಡಿರಿ ಎಂದ. ಕತೆ ಹೇಳಿದ, ಪುರಾಣ ಹೇಳಿದ. ಆದರೆ ಹುಟ್ಟಾ ಕ್ರಾಂತಿಕಾರ. ಸಮಾಜದ ರೂಢಿಯನ್ನು ನೋಡಿ ಸಹಿಸಲಾರದೆ ಅವನ್ನು ಬದಲಾಯಿಸಬೇಕೆಂದವ. ಯಹೂದ್ಯರು ಬಯಸಿದ ಅವತಾರ ಇದಲ್ಲ. ಅಂತಲೆ, ಅವರಲ್ಲನೇಕರು ಯೇಸುವಿಗೆ ಇದಿರು ನಿಂತು ರೋಮನ್ ಅಧಿಕಾರಿಗಳಿಗೆ ಅವನನ್ನು ಹಿಡಿದು ಕೊಟ್ಟರು.

ಧರ್ಮ, ಮತ ಎಂದರೆ ರೋಮನರಿಗೆ ಅಸಹನೆಯಿರಲಿಲ್ಲ. ರೋಮನ್ ಸಾಮ್ರಾಜ್ಯದಲ್ಲಿ ಎಲ್ಲ ಧರ್ಮಗಳಿಗೂ ಅವಕಾಶವಿತ್ತು. ದೇವರನ್ನೇ ನಿಂದಿಸಿದರೂ, ನಾಸ್ತಿ ಎಂದರೂ ಅವರ ತಲೆ ಹೋಯ್ಯುತ್ತಿರಲಿಲ್ಲ. ಅವರ ಚಕ್ರವರ್ತಿಗಳೊಲ್ಲಬ್ಬ ಟೈಬೀರಿಯಸ್ ಹೇಳಿದ್ದ : 'ದೇವರಿಗೆ ಅವಮಾನವಾದರೆ ಆ ಚಿಂತೆ ಅವರಿಗೇ ಇರಲಿ.' ಆದ್ದರಿಂದ ಪಾಂಟಿಯಸ್ ಪೈಲೆಟ್‌ಗೆ, ಯೇಸು

ವನ್ನು ದಂಡಿಸಿದ ರೋಮನ್ ಅಧಿಕಾರಿಗೆ, ಧರ್ಮದ ಚಿಂತೆಯಿರಲಿಲ್ಲ; ಈ ವ್ಯವಹಾರದಲ್ಲಿ. ಯೇಸು ರಾಜದ್ರೋಹಿ; ಯಹೂದ್ಯರ ಕಣ್ಣಲ್ಲಿ ಲೋಕಕಂಟಕ. ಈ ತಪ್ಪಿಗಾಗಿ ಅವನ ವಿಚಾರಣೆ ನಡೆದು, ಗೊಲ್ಗೊಥಾದಲ್ಲಿ ಮರಣದಂಡನೆಯಾದದ್ದು. ಪರೀಕ್ಷೆಯ ಸಂಕಟಕಾಲ್ ತೀರ ಹತ್ತಿರಬಂದಾಗ ಅವನ ಆಪ್ತ ಶಿಷ್ಯರೂ ಅವನ ಕೈಬಿಟ್ಟರು, ತಿರುಗಿ ಬಿದ್ದರು. ಇದರಿಂದ ಅವನ ಸಂಕಟ ದುರ್ಭರವಾಯಿತು. ಸಾಯುವಾಗ 'ದೇವರೆ, ನೀ ನನ್ನ ಕೈಬಿಟ್ಟೆಯಾ? ದೇವರೆ, ನೀ ನನ್ನ ಕೈಬಿಟ್ಟೆಯಾ ?' ಎನ್ನುವಂತಾಯಿತು. ಎಂಥ ಮನಕರಗಿಸುವ ಮಾತು ಅದು !

ಸಾಯುವಾಗ ಯೇಸುವಿಗೆ ಇನ್ನೂ ಎಳೆಹರೆಯ; ಮೂವತ್ತೆ ವರ್ಷ. ಬೈಬಲಿನ ಮಧುರ ಭಾಷೆಯಲ್ಲಿ ಅವನ ಸಾವಿನ ಕರುಣಕಥೆ ಓದಿ ನಮ್ಮ ಮನಸ್ಸು ಕರಗುತ್ತದೆ. ಕಾಲಕ್ರಮೇಣ ಕಿರಸ್ತಾನ ಮತ ಬೆಳೆದು ಕೋಟ್ಯಾನುಕೋಟಿ ಜನ ಯೇಸುವಿನ ಹೆಸರಿಗೆ ಕೈಮುಗಿವಂತಾಗಿದೆ. ಅವನ ಉಪದೇಶ ಅನುಸರಿಸುವವರು ಮಾತ್ರ ವಿರಳ. ಯೇಸುವನ್ನು ಸಿಲುಬೆಗೇರಿಸಿದಾಗ ಅವನ ಹೆಸರು ಪೇಲಸ್ತೀನ್ ಹೊರಗೆ ಯಾರಿಗೂ ಗೊತ್ತಿರಲಿಲ್ಲ. ರೋಮ್‌ನಲ್ಲಿ ಯಾರಿಗೂ ಏನೂ ತಿಳಿದಿರಲಿಲ್ಲ; ಪಾಂಟಿಯಸ್ ಪೈಲೆಟ್‌ಗೂ ಇದೊಂದು ಮಹಾ ವಿಷಯ ಅನಿಸಿರಲಿಲ್ಲ.

ಜನರ ಬೆದರಿಕೆಗೆ ಅಂಜಿ ಯೇಸುವಿನ ಆಪ್ತ ಶಿಷ್ಯರೆಲ್ಲ ತಮ್ಮ ಗುರುವನ್ನು ತಿರಸ್ಕರಿಸಿದರೂ, ಯೇಸು ಸತ್ತಮೇಲೆ ಪಾಲ್ ಎಂಬವನೊಬ್ಬ ಬಂದ. ಯೇಸುವನ್ನು ಕಣ್ಣಿಂದ ಕಾಣದಿದ್ದರೂ ಕ್ರಿಸ್ತನ ತತ್ವವೆಂದು ತನಗೆ ತಿಳಿದದ್ದನ್ನು ಪ್ರಚಾರ ಮಾಡತೊಡಗಿದ. ಪಾಲ್ ಪ್ರಚಾರಮಾಡಿದ ಕ್ರಿಸ್ತತತ್ವಕ್ಕೂ ಕ್ರಿಸ್ತನ ಉಪದೇಶಕ್ಕೂ ಸಂಬಂಧವೆ ಇಲ್ಲವೆಂದು ಅನೇಕರು ತಿಳಿಯುತ್ತಾರೆ. ಪಾಲ್ ಒಳ್ಳೆ ಪಂಡಿತ, ಸಮರ್ಥ. ಆದರೆ ಯೇಸುವಿನಂತೆ ಕ್ರಾಂತಿಪುರುಷನಲ್ಲ, ಲೋಕವಿರೋಧಿಯಲ್ಲ. ಅಂತೂ ಪಾಲ್ ಗೆದ್ದ; ಕಿರಸ್ತಾನ ಧರ್ಮ ಹರಡಿತು. ಮೊದಮೊದಲು ರೋಮನರು ಅದಕ್ಕೇನೂ ಬೆಲೆ ಕೊಡಲಿಲ್ಲ. ಕಿರಸ್ತಾನರೆಂದರೆ ಯಹೂದ್ಯರಲ್ಲೊಂದು ಪಂಗಡ ಎಂದುಕೊಂಡರು. ಬರಬರುತ್ತ ಕಿರಸ್ತಾನರ ಪ್ರಾಬಲ್ಯ ಹೆಚ್ಚಿತು. ಉಳಿದೆಲ್ಲ ಧರ್ಮಗಳನ್ನೂ ಅವರು ವಿರೋಧಿಸುತ್ತ ಬಂದರು. ಚಕ್ರವರ್ತಿಯ ವಿಗ್ರಹದ ಪೂಜೆ ಮಾಡಲು ಸ್ಪಷ್ಟವಾಗಿ ನಿರಾಕರಿಸಿದರು. ಇದು ಹಟಮಾರಿತನದ ಕೀಳು ಬುದ್ಧಿ ಅನಿಸಿತು ರೋಮನರಿಗೆ. ಅವರಿಗೆ ಈ ರೀತಿ ಅರ್ಥವಾಗಲಿಲ್ಲ. ಇವರೆಲ್ಲ ಹುಚ್ಚರು, ಅಸಂಸ್ಕೃತರಾದ ಒರಟರು, ಮಾನವಪ್ರಗತಿಗೆ ವಿರೋಧಿಗಳು ಎಂದುಕೊಂಡರು. ಕ್ರಿಸ್ತಧರ್ಮ ಇದ್ದರೆ ಇರಲಿ ಎನ್ನಬಹುದಾಗಿತ್ತು. ಚಕ್ರವರ್ತಿಯ ವಿಗ್ರಹಕ್ಕೆ ಮರ್ಯಾದೆ ಸಲ್ಲಿಸದಿದ್ದರೆ ಸಹಿಸಲಾದೀತೆ ? ಅದು ರಾಜದ್ರೋಹ

ನೆಂದರು. ಮರಣ ದಂಡನೆ ವಿಧಿಸಿದರು. ಈ ಭೀಕರತೆಯನ್ನು ಕಿರಸ್ತಾನರು ಹಳಿದರು, ವಿರೋಧಿಸಿದರು. ಆದರಿಂದ ಕಂಡಕಂಡಲ್ಲಿ ಕಿರಸ್ತಾನರನ್ನು ಸಿಂಹದ ಬಾಯಿಗೆ ಕೊಡಲಾಯಿತು, ಅವರ ಮನೆಮಠಗಳನ್ನು ಕಿತ್ತುಕೊಂಡರು. ಈ ಕ್ರಿಸ್ತಾನ ಧರ್ಮವೀರರ ಕತೆ ನೀ ಓದಿರಬೇಕು, ಚಲಚ್ಚಿತ್ರಗಳಲ್ಲೂ ನೋಡಿರ ಬಹುದು. ಆದರೆ ತಾ ನಂಬಿದ ಧರ್ಮಕ್ಕಾಗಿ ಪ್ರಾಣ ಕೊಡಲು ಸಿದ್ಧವಾಗಿ, ಆ ಸಾವಿನಲ್ಲಿ ಆನಂದಪಡೆಯಲು ನಿಂತವನೇಲೆ ಆ ಜೀವಿಯನ್ನಾಗಲಿ ಆ ಧರ್ಮವನ್ನಾಗಲಿ ತುಳಿದು ಹಾಕಲು ಸಾಧ್ಯವಲ್ಲ. ಕಿರಸ್ತಾನರನ್ನು ನಿಗ್ರಹಿ ಸುವುದು ರೋಮನ್ ಸಾಮ್ರಾಜ್ಯಕ್ಕೆ ಎಳ್ಳಷ್ಟೂ ಸಾಧ್ಯವಾಗಲಿಲ್ಲ. ಆ ಹೋರಾಟದಲ್ಲಿ ಕೊನೆಗೆ ಕಿರಸ್ತಾನ ಧರ್ಮವೆ ಗೆದ್ದದ್ದು. ಕ್ರಿ. ಶ. ೪ನೆಯ ಶತಮಾನದ ಪ್ರಾರಂಭದಲ್ಲಿ ರೋಮನ್ ಚಕ್ರವರ್ತಿಯೆ ಕಿರಸ್ತಾನನಾದ, ಕಿರಸ್ತಾನ ಧರ್ಮವೆ ಸಾಮ್ರಾಜ್ಯದ ರಾಜಧರ್ಮವಾಯಿತು. ಕಾನ್‌ಸ್ಟಾಂಟಿನೋಪಲ್ ನಗರವನ್ನು ಕಟ್ಟಿದ ಕಾನ್‌ಸ್ಟೆಂಟೈನ್ ಆ ದೊರೆ. ಆತನ ವಿಷಯ ಮುಂದೆ ಬರುತ್ತದೆ.

ಕ್ರಿಸ್ತಧರ್ಮ ಬಲಿತ ಹಾಗೆ ಯೇಸು ದೇವಪುರುಷನಲ್ಲ, ಹೌದು ಎಂಬ ಜಗಳ ಬೆಳೆಯಿತು. ಏಸು ದೇವರ ಅಂಶವೆಂಬ ಪಾಶ್ಚಾತ್ಯ ಕ್ರಿಸ್ತಾನರನೇಕರಿ ಗಿಂತ ಇವತ್ತು ಬಾಪುವೇ ನಿಜವಾಗಿ ಕ್ರಿಸ್ತ ಧರ್ಮವನ್ನು ಆಚರಿಸುತ್ತಿದಾರೆ; ಕ್ರಿಸ್ತ ಧರ್ಮಕ್ಕೆ ಅವರ ಬಾಳು ಹೊಂದಿಕೊಂಡಷ್ಟು ಉಳಿದವರದು ಹೊಂದಿ ಕೊಂಡಿಲ್ಲ ಎಂದು ಅನೇಕರಿಗೆ ಅನಿಸಿದರೆ ಆಶ್ಚರ್ಯವಿಲ್ಲ.

೩೨

# ರೋಮ್ ಸಾಮ್ರಾಜ್ಯ

ಏಪ್ರಿಲ್ ೨೩, ೧೯೩೨

ಮಗು, ನಿನಗೆ ಪತ್ರಬರೆದು ಬಹಳ ದಿನವಾಯಿತು. ಅಲಹಾಬಾದಿನ ಸುದ್ದಿ, ಅದರಲ್ಲೂ ನಿನ್ನ ಅಜ್ಜಿ ದಾಲ್ ಅಮ್ಮನ ಸುದ್ದಿ, ನನಗೆ ವ್ಯಸನವಿರು ಮಾಡಿದೆ; ನನ್ನ ಮನಸ್ಸನ್ನು ಕಲಕಿದೆ. ಬಲಹೀನೆ, ಸುಕುಮಾರಿ ಆದ ನನ್ನ ತಾಯಿ ಪೋಲೀಸರ ಲಾಠೀ ಪೆಟ್ಟನ್ನು ಇದಿರಿಸಬೇಕಾಯಿತಲ್ಲ, ಅನುಭವಿಸ ಬೇಕಾಯಿತಲ್ಲ; ಆಕೆ ಅಲ್ಲಿ ಹಾಗೆ ಅದನ್ನು ಅನುಭವಿಸುವಾಗ ನಾನಿಲ್ಲಿ ಈ ಸೆರೆಮನೆಯಲ್ಲಿ ಹಾಯಾಗಿದೇನಲ್ಲ ಅನಿಸಿ ಮನಸ್ಸಿಗೆ ಬೇಸರವಾಯಿತು. ಆದರೆ ನನ್ನ ಮನಸ್ಸಿನ ವಿಚಾರ ತರಂಗಗಳಿಗೆ ಸಿಕ್ಕಿ ನನ್ನ ಕಥೆಗೆ ಅಡ್ಡಿಮಾಡಿಕೊಳ್ಳ ಬಾರದು.

ರೋಮಿನ ಸಂಗತಿ ನೋಡೋಣ. ಹಳೆಯ ಸಂಸ್ಕೃತ ಪುಸ್ತಕಗಳಲ್ಲಿ ರೋಮಕ ಎನ್ನುತ್ತಾರೆ. ರಿಪಬ್ಲಿಕ್ (ಪ್ರಜಾಸತ್ತೆ) ರೋಮ್ ಕೊನೆಗಂಡು ರೋಮ್ ಸಾಮ್ರಾಜ್ಯವಾದ ಸಂಗತಿಯನ್ನು ಆಗಲೆ ಹೇಳಿದೇನೆ. ಜೂಲಿಯಸ್ ಸೀಜರನ ಮತ್ತು ಮಗ ಅಕ್ಟೇವಿಯಸ್, ಆಗಸ್ಟಸ್ ಸೀಜರ್ ಎಂಬ ಹೆಸರಿನಿಂದ ಮೊದಲನೆ ಚಕ್ರವರ್ತಿಯಾದ. ದೊರೆ ಎಂದು ಅವನು ಹೇಳಿಸಿಕೊಳ್ಳಲಿಲ್ಲ. ದೊರೆ ಎಂಬ ಅಭಿಧಾನ ಅವನ ಯೋಗ್ಯತೆಗೆ ಸಾಲಲಿಲ್ಲವಂತೆ; ಸಾಲದುದಕ್ಕೆ ರಿಪಬ್ಲಿಕ್‌ನ ರೀತಿ ರೂಪ ಕೊಂಚ ಇದ್ದುಕೊಂಡಿರಲಿ ಎಂಬ ಆಸೆಯೂ ಇತ್ತು. ಆದುದರಿಂದ 'ಇಂಪರೇಟರ್' – ಎಂದರೆ ವಿಧಾಯಕ, ಅಪ್ಪಣೆ ಕೊಡುವವನು – ಎನಿಸಿಕೊಂಡ. ಅಂದಿನಿಂದ ಈ ಇಂಪರೇಟರ್ ಪದವೆ ಎಲ್ಲಕ್ಕಿಂತ ಶ್ರೇಷ್ಠ ಗೌರವಪದವಾಯಿತು. ಇಂಗ್ಲಿಷಿನಲ್ಲಿರುವ ಎಂಪರರ್ ಎಂಬ ಪದ ಬಂದದ್ದು ಅದರಿಂದಲೆ. ಅಂತು, ಮೊಟ್ಟಮೊದಲಿನ ರೋಮ್ ಸಾಮ್ರಾಜ್ಯ ಪ್ರಪಂಚಕ್ಕೆ ಎರಡು ಶಬ್ದಗಳನ್ನು ನೀಡಿತು; ಜಗತ್ತಿನ ಎಲ್ಲ ರಾಜಾಧಿರಾಜರೂ ಆ ಶಬ್ದಗಳನ್ನು ಬಳಸಲು ಆಸೆಗೊಂಡರು, ಬಳಸಿದರು: ಎಂಪರರ್; ಸೀಜರ್, ಅಥವ ಕೈಸರ್, ಅಥವ ಜಾರ್. ಮೊದಮೊದಲು ಚಕ್ರವರ್ತಿಯೆಂದರೆ ಜಗತ್ತಿಗೆಲ್ಲ ಒಬ್ಬನೇ ಇರಬೇಕು; ಒಬ್ಬ ಒಡೆಯನಿದ್ದ ಹಾಗೆ ಎಂಬ ಅಭಿಪ್ರಾಯವಿತ್ತು. ರೋಮ್ ಜಗತ್ತಿನ ಒಡತಿ ಎನ್ನುತ್ತಿದ್ದರು. ರೋಮ್ ಮೊದಲು, ಉಳಿದ ಜಗತ್ತು ಅದರ ನೆರಳು ಅನಿಸಿತ್ತು ಪಶ್ಚಿಮದ ಜನರಿಗೆ. ಅದು ಸರಿಯಲ್ಲ; ಅವರಿಗೆ ಭೂಗೋಳ, ಇತಿಹಾಸ ಸರಿಯಾಗಿ ತಿಳಿದಿರಲಿಲ್ಲವೆಂದು ಅದರರ್ಥ. ರೋಮ್ ಸಾಮ್ರಾಜ್ಯ ವಿಶೇಷವಾಗಿ ಮೆಡಿಟರೇನಿಯನ್ ಸಾಮ್ರಾಜ್ಯ. ಮೂಡಲಿಗೆ ಮೆಸಪೊಟೇಮಿಯ ದಾಟಲಿಲ್ಲ. ಕಾಲಕಾಲಕ್ಕೆ ಭಾರತದಲ್ಲೂ ಚೀನಾದಲ್ಲೂ ಅದಕ್ಕಿಂತ ಬಲಯುತವಾದ ವಿಸ್ತಾರವಾದ ರಾಜ್ಯಗಳಿದ್ದುವು. ಪಶ್ಚಿಮ ಖಂಡದಲ್ಲೇನೋ ರೋಂ ಒಂದೇ ಏಕೈಕ ಸಾಮ್ರಾಜ್ಯ. ಆದ್ದರಿಂದ ಆ ಕಾಲದ ಜನಕ್ಕೆ ಅದೇ ಅಖಂಡ ಭೂಮಂಡಲ ಸಾಮ್ರಾಜ್ಯ ಅನಿಸಿತ್ತು. ಅದರ ಗೌರವವೂ ಅಪಾರವಾಗಿತ್ತು.

ರೋಂ ಸಾಮ್ರಾಜ್ಯದ ವಿಷಯದಲ್ಲಿ ಎಲ್ಲಕ್ಕಿಂತ ಆಶ್ಚರ್ಯಕರವಾದ ಮಾತು ಅದರ ಹಿನ್ನೆಲೆ, ಅದರ ಮೂಲ ವಿಚಾರ: ಸಮಸ್ತ ಭೂಮಂಡಲದ ಒಡೆತನ, ಜಗತ್ಸಾಮ್ರಾಜ್ಯ. ರೋಂ ಕೆಳಗೆ ಬಿದ್ದರೂ ಈ ಭಾವನೆ ಅದಕ್ಕೆ ರಕ್ಷೆಯಾಗಿತ್ತು, ಚೇತನದಾಯಕವಾಗಿತ್ತು. ರೋಂ ಸಾಮ್ರಾಜ್ಯದ ತಳಕು ತಪ್ಪಿಹೋದರೂ ಈ ವಿಚಾರ ಮಾತ್ರ ನಿಲ್ಲಲಿಲ್ಲ. ಸಾಮ್ರಾಜ್ಯವೇ ಮಾಯವಾಗಿ, ಬರೀ ಗಾಳಿಗನಸಾದ ಮೇಲೂ ಈ ವಿಚಾರವೇನೋ ನೆಲೆಯಾಗಿ ಉಳಿಯಿತು.

ರೋಮಿನ ವಿಷಯ, ಅದರ ತರುವಾಯ ಬಂದವುಗಳ ವಿಷಯ ಬರೆಯಲು ನನಗೆ ಕಷ್ಟವೆನಿಸುತ್ತದೆ. ನಿನಗೇನು ಹೇಳಬೇಕೋ ಅರಿಸಲು ಸುಲಭವಲ್ಲ.

ಹೆಚ್ಚಾಗಿ ಸೆರೆಮನೆಯಲ್ಲಿ ಓದಿದ ಪುಸ್ತಕಗಳಿಂದ ಗ್ರಹಿಸಿದ ಚಿತ್ರವಿಚಿತ್ರ ದೃಶ್ಯಗಳ ಸಂಗ್ರಹಾಲಯವಾಗಿದೆ ನನ್ನ ಮನಸ್ಸು. ರೋಂ ಇತಿಹಾಸದ ಬಗ್ಗೆ ಒಂದು ಸುಪ್ರಸಿದ್ಧ ಗ್ರಂಥವಿದೆ. ಸೆರೆಮನೆಗೆ ಬಾರದಿದ್ದರೆ ನಾನದನ್ನು ಓದುತ್ತಿದ್ದೆನೋ ಇಲ್ಲವೋ ! ಆ ಗ್ರಂಥ ಬಲು ದೊಡ್ಡದು. ಉಳಿದ ಕೆಲಸಗಳ ಗದ್ದಲದ ನಡುವೆ ಅದನ್ನು ಓದುವುದು ಬಹು ಪ್ರಯಾಸ. ಅದರ ಹೆಸರು 'ರೋಂ ಸಾಮ್ರಾಜ್ಯದ ಅವನತಿ-ವಿನಾಶ' (The Decline and fall of the Roman Empire). ಅದನ್ನು ಬರೆದಾತ ಇಂಗ್ಲಿಷು ಲೇಖಕ; ಹೆಸರು ಗಿಬ್ಬನ್. ಬಹಳ ಕಾಲದ ಹಿಂದೆಯೆ – ೧೫೦ ವರ್ಷಕ್ಕೆ ಹಿಂದೆಯೆ – ಸ್ವಿಟ್ಜರ್ಲೆಂಡಿನ ಲಾಸಾನ್ ತೀರದಲ್ಲಿ ಬರೆದ ಗ್ರಂಥ ಅದು. ಈಗಲೂ ಮನೋಹರವಾಗಿದೆ. ಭಾಷೆಯಲ್ಲಿ ಆಡಂಬರವಿದ್ದರೂ ಮಾಧುರ್ಯವಿದೆ; ಕಥಾಭಾಗದಲ್ಲಿ ಕಾದಂಬರಿಗಳಿಗಿಂತ ರುಚಿಕರವಾಗಿದೆ, ತಲ್ಲೀನ ಮಾಡುತ್ತದೆ. ಹತ್ತು ವರುಷದ ಹಿಂದೆಯೆ ಲಖನವ್ ಸೆರೆಮನೆಯಲ್ಲಿ ಅದನ್ನೋದಿದೆ. ಒಂದು ತಿಂಗಳು ಕಾಲ ಗಿಬ್ಬನನ ಸಹವಾಸದಲ್ಲಿ, ಅತನ ಭಾಷೆಯಲ್ಲಿ ಮೂಡಿ ಬಂದ ಪುರಾತನ ದೃಶ್ಯಗಳಲ್ಲಿ, ಮಗ್ನನಾಗಿದ್ದೆ. ಆ ಪುಸ್ತಕ ಇನ್ನೂ ಮುಗಿದಿರಲಿಲ್ಲ, ಅಷ್ಟರಲ್ಲಿಯೆ ಬಿಡುಗಡೆಯಾಯಿತು. ಅದರಿಂದ ಆ ಮೋಡಿ ಭಂಗವಾಯಿತು. ಉಳಿದಿದ್ದ ನೂರು ನೂರಿಪ್ಪತ್ತು ಪುಟ ಓದಲು ಹೊತ್ತು ಸಿಗುವುದೂ ಕಷ್ಟವಾಯಿತು; ಪುರಾತನ ರೋಂ, ಕಾನ್‌ಸ್ಟಾಂಟಿನೋಪಲ್‌ಗಳನ್ನು ಮತ್ತೆ ದರ್ಶನ ಮಾಡಿಕೊಳ್ಳುವ ಮನಸ್ಸಿನ ಹದವೂ ಇಲ್ಲದಾಯಿತು.

ಇದೆಲ್ಲ ಹತ್ತು ವರುಷದ ಹಿಂದಿನ ಮಾತು. ಆಗ ನಾನು ಓದಿದ್ದರಲ್ಲಿ ಎಷ್ಟೋ ಮರೆತುಹೋಗಿದೆ. ಆದರೂ ಮನಸ್ಸನ್ನೆಲ್ಲ ತುಂಬಿ, ಗೊಂದಲಗೆಡಿಸುವಷ್ಟು ಮಟ್ಟಿಗೇನೋ ನೆನಪಿದೆ. ಆ ಗೊಂದಲವನ್ನೆಲ್ಲ ನಿನಗೆ ಸುತ್ತಿಬಿಡಲೆ? ಬೇಡ.

ಕೊಂಚ ಸಿಂಹಾವಲೋಕನ ಮಾಡೋಣ. ತರುವಾಯ ಆ ಚಿತ್ರಕ್ಕೆ ಬಣ್ಣ ಬೇಕಾದರೆ ಚಿಮುಕಿಸೋಣ.

ಕ್ರಿಸ್ತ ಶಕಾರಂಭದಲ್ಲಿ ರೋಂ ಸಾಮ್ರಾಜ್ಯ ಪ್ರಾರಂಭ; ಆಗಸ್ಟಸ್ ಸೀಸರ್ ಚಕ್ರವರ್ತಿ. ಕೆಲವು ಕಾಲ ಚಕ್ರವರ್ತಿಗಳು 'ಸೆನೆಟ್'ಗೆ ಗೌರವ ಕೊಡುತ್ತಿದ್ದರು. ಬಲು ಬೇಗನೆ ಪ್ರಜಾ ಪ್ರಭುತ್ವದ (ರಿಪಬ್ಲಿಕ್) ಲಕ್ಷಣವೆಲ್ಲ ಮಾಯವಾಗಿ ಚಕ್ರವರ್ತಿ ಸರ್ವಶಕ್ತ, ಸರ್ವಸ್ವತಂತ್ರ ರಾಜ, ಪ್ರತ್ಯಕ್ಷ ದೈವವೆ ಆದ. ಬದುಕಿದ್ದಾಗ ದೈವಾಂಶ; ಸತ್ತಮೇಲೆ ಅವತಾರವೆ. ಪೂರ್ವದ ಚಕ್ರವರ್ತಿಗಳ ಕಾಲದ ಗ್ರಂಥಕರ್ತರೆಲ್ಲರದೂ ಒಂದೇ ದಾರಿ: ಚಕ್ರವರ್ತಿಗಳನ್ನು ಸಕಲ ಸದ್ಗುಣ ಸಂಪನ್ನರೆಂದು ವರ್ಣಿಸುವುದು ಆಗಸ್ಟಸ್ ಸೀಸರನ ವಿಷಯದಲ್ಲಂತೂ ಇದು ವಿಪರೀತವಾಗಿತ್ತು. ಅವನ ಕಾಲ ಕೃತಯುಗವಂತೆ, ಸ್ವರ್ಣ

ಯುಗವಂತೆ; ಪುಣ್ಯ ಬೆಳಗಿ, ಶಿಷ್ಟರು ಗೌರವಿತರಾಗಿ ದುಷ್ಟರು ಶಿಕ್ಷಿಸಲ್ಪಟ್ಟ ಕಾಲವಂತೆ. ನಿರಂಕುಶ ರಾಜ್ಯಗಳ ಗ್ರಂಥಕರ್ತರ ರೀತಿಯೇ ಹೀಗೆ: ದೊರೆಯ ಸ್ತುತಿ ಲಾಭಕರ. ಲ್ಯಾಟಿನ ಕವಿಗಳಲ್ಲಿ ಪ್ರಸಿದ್ಧರಾದ ವರ್ಜಿಲ್, ಓವಿಡ್, ಹೊರೇಸ್ --- ನಾವು ಶಾಲೆಯಲ್ಲಿ ಅಭ್ಯಾಸ ಮಾಡುವ ಕವಿಗಳು— ಈ ಕಾಲದಲ್ಲಿದ್ದವರು. ಪ್ರಜಾಪ್ರಭುತ್ವದ ಕೊನೆಕೊನೆಯಲ್ಲಿ ನಡೆದ ನಿರಂತರ ಅಂತಃಕಲಹ ಕದನಗಳ ತರುವಾಯ ಈ ಶಾಂತಿ ಸಮಾಧಾನದ, ವ್ಯವಹಾರ ನಾಗರಿಕತೆ ಬೆಳೆಯಬಹುದಾದ ಕಾಲ ಬಂದದ್ದು ಎಷ್ಟೋ.

ಈ ನಾಗರಿಕತೆ ಎಂಥಮ ಗೊತ್ತೆ? ಶ್ರೀಮಂತರ ನಾಗರಿಕತೆ. ಆ ಶ್ರೀಮಂತರಾದರೂ ಪುರಾತನ ಗ್ರೀಸಿನ ಕಲಾಭಿಜ್ಞರಾದ ಸೂಕ್ಷ್ಮಬುದ್ಧಿಯ ಶ್ರೀಮಂತರಂತಲ್ಲ; ಸಾಮಾನ್ಯರಾದ ಮಂದಬುದ್ಧಿಯ ಜನಜಂಗುಳಿ; ಸುಖ ಲೋಲುಪತೆಯೊಂದೆ ಅವರ ಉದ್ಯೋಗ. ಜಗತ್ತಿನ ನಾನಾ ಮೂಲೆಗಳಿಂದ ಆಹಾರ, ಭೋಗಸಾಮಗ್ರಿ ಬರುತ್ತಿದ್ದವು ಅವರಿಗಾಗಿ. ಬೇಕಾದಷ್ಟು ವೈಭವ ವಿಜೃಂಭಣೆ ಇತ್ತು. ಇಂಥ ಜನ ಇಂದಿಗೂ ಇದಾರೆ; ಈ ವಂಶ ನಾಶವಾಗಿಲ್ಲ. ಆಡಂಬರ, ಅಲಂಕಾರ, ಅದ್ಭುತವಾದ ಮೆರವಣಿಗೆಗಳು, ಕ್ರೀಡಾ ವಿನೋದ, ಎಲ್ಲವೂ ಇದ್ದವು. ಇದೆಲ್ಲ ವೈಭವದ ಮರೆಯಲ್ಲಿ ಜನಕೋಟಿಯ ಬಡತನ ವಿತ್ತು. ದುರ್ಭರವಾದ ತೆರಿಗೆ ಸಾಮಾನ್ಯ ಜನರಿಗೆ; ಕಷ್ಟದ ಕೆಲಸ ಗುಲಾ ಮರಿಗೆ. ಗುಲಾಮರಿಗಂತೂ ಲೆಕ್ಕವೆ ಇಲ್ಲ. ರೋಂ ವಿದ್ವಾಂಸರಿಗೆ ವೈದ್ಯ ವಿದ್ಯೆ, ತತ್ವಜ್ಞಾನ, ವಿಚಾರ, ಎಲ್ಲವೂ. ಉಳಿದದ್ದು ಗ್ರೀಕ್ ಗುಲಾಮರ ಪಾಲಿಗೆ! ತಾವು ಜಗದಧಿಪತಿಗಳಂತೆ; ತಮ್ಮ ಆ ಜಗತ್ತಿನ ವಿಷಯ ತಿಳಿದು ಕೊಳ್ಳಲಿಕ್ಕಾಗಲಿ, ಗುಲಾಮರಿಗೆ ಶಿಕ್ಷಣ ಕೊಡಲಾಗಲಿ ಪ್ರಯತ್ನಲೇಶವೂ ಮಾಡಲಿಲ್ಲ.

ಒಬ್ಬರ ತರುವಾಯ ಒಬ್ಬರು, ಚಕ್ರವರ್ತಿಗಳ ಪರಂಪರೆ ಸಾಗಿಬಂತು. ಕೆಲವರು ನೀಚರು, ಇನ್ನು ಕೆಲವರು ಅತಿ ನೀಚರು. ಕೊನೆಕೊನೆಗೆ ಅಧಿಕಾರ ವೆಲ್ಲ ಸೇನೆಯ ಕೈಗೆ ಬಂತು. ಅವರು ಆಡಿದ್ದೇ ಆಟ, ಮಾಡಿದ್ದೇ ಕೆಲಸ· ಅವರಿಗೆ ಇಷ್ಟ ಬಂದರೆ ದೊರೆತನ ಕಟ್ಟಿದರು; ಇಲ್ಲದಿದ್ದರೆ ಸಿಂಹಾಸನದಿಂದ ಇಳಿಸಿದರು. ಹೀಗಾಗಿ ಸೇನೆಯ ಅನುಗ್ರಹಕ್ಕಾಗಿ ಸ್ಪರ್ಧೆ ನಡೆದು, ಅವರಿಗೆ ಲಂಚ ಕೊಡಲು ಜನರನ್ನು ಗಾಣವಾಡಿದರು ನಾಯಕರು; ಅಧೀನ ರಾಜ್ಯಗ ಳನ್ನು ಹಿಂಡಿದರು. ಗುಲಾಮರ ವ್ಯಾಪಾರವು ಹಣಸಂಪಾದನೆಗೊಂದು ಮುಖ್ಯ ಸಾಧನವಾಗಿತ್ತು. ರೋಮನ್ ಸೇನೆಗಳು ಗುಲಾಮರಿಗಾಗಿ ಪೂರ್ವ ಖಂಡವನ್ನೆಲ್ಲ ಜಾಲಿಸಿಬಿಡುತ್ತಿದ್ದವು. ಅದೊಂದು ಕ್ರಮವಾದ ವ್ಯವಹಾರವೆ ಆಗಿತ್ತು. ಅಲ್ಲಿಂದಲ್ಲೆ ಗುಲಾಮರನ್ನು ಕೊಂಡುಕೊಳ್ಳಲು ಸೇನೆಯ ಜೊತೆ ಯಲ್ಲಿ ವರ್ತಕರೂ ಹೋಗುತ್ತಿದ್ದರು. ಗ್ರೀಕರ ಪುಣ್ಯಕ್ಷೇತ್ರ ಡೇಲಾಸ್‌ದ್ವೀಪ

ಗುಲಾಮರ ಸಂತೆಯು ಊರಾಯಿತು; ಒಂದೊಂದು ಸಲ ದಿನಕ್ಕೆ ಹತ್ತು ಸಾವಿರ ಗುಲಾಮರ ಮಾರಾಟವಾಗುತ್ತಿತ್ತು! ರೋಮಿನ ಕಾಲೊಸಿಯುಂನಲ್ಲಿ ಜನಪ್ರೀತನಾದ ದೊರೆಯೊಬ್ಬ ಒಂದೊಂದು ಸಲಕ್ಕೆ ೧೨೦೦ ಬಲಿಪಶುಗಳನ್ನು–ದೊರೆಯು, ಜನರ ಕ್ರೀಡಾವಿನೋದಾರ್ಥವಾಗಿ ಸಾಯಬೇಕಾಗಿದ್ದ ಗುಲಾಮರನ್ನು–ಪ್ರದರ್ಶಿಸುತ್ತಿದ್ದ.

ಸಾಮ್ರಾಜ್ಯ ವೈಭವದ ಕಾಲದ ರೋಮುಕ ಸಂಸ್ಕೃತಿ ಇದು. ಆದರೂ ಗಿಬ್ಬನ್ ಬರೆದಿದ್ದಾನೆ: 'ಜಗತ್ತಿನ ಇತಿಹಾಸದಲ್ಲಿ ಯಾವ ಕಾಲದಲ್ಲಿ ಮಾನವ ಜಾತಿ ಅತ್ಯಂತ ಸುಖ ಸಂತೋಷ, ಸಮೃದ್ಧಿಗಳಿಂದ ತುಂಬಿತ್ತೋ ಹೇಳೆಂದರೆ ಡಾಮಿಟಿಯನ್ ಸತ್ತಮೇಲೆ ಕಮೋಡಸ್ ಪಟ್ಟಕ್ಕೆ ಬರುವವರೆಗಿನ ಕಾಲವೆಂದು ನಿಸ್ಸಂಕೋಚವಾಗಿ ಯಾರಾದರೂ ಹೇಳಬಹುದು.' ಅಂದರೆ ಕ್ರಿ. ಶ. ೯೬ ರಿಂದ ಕ್ರಿ. ಶ. ೧೮೦ ರ ವರೆಗಿನ ೮೪ ವರ್ಷ. ಗಿಬ್ಬನ್ ತುಂಬಾ ವಿದ್ವಾಂಸ. ಆದರೂ ಆತ ಹೇಳಿದ ಈ ಮಾತನ್ನು ಬಹಳ ಜನ ಒಪ್ಪಲಾರರು. ಆತನ ಮಟ್ಟಿಗೆ ಮಾನವ ಜಾತಿಯೆಂದರೆ ಮೆಡಿಟರೇನಿಯನ್ ಪ್ರಪಂಚ. ಭಾರತ, ಚೀನಾ, ಪ್ರಾಚೀನ ಮಿಶ್ರದೇಶಗಳ ಮಾತು ಆತನಿಗೇನು ಗೊತ್ತು.

ರೋಮಿನ ಮೇಲೆ ಕೊಂಚ ನಿಷ್ಠುರತೆ ತೋರಿದೆನೋ ಏನೋ ನಾನು. ರೋಂ ರಾಜ್ಯದಲ್ಲಿ ಸ್ವಲ್ಪ ಶಾಂತಿಯುಂಟಾದುದು ಉಲ್ಲಾಸದಾಯಕವಾಗಿದ್ದಿರಬೇಕು. ಗಡಿನಾಡಿನಲ್ಲಿ ಸಹ ಯುದ್ಧ ನಡೆದಿದ್ದರೂ ಸಾಮ್ರಾಜ್ಯದ ಒಳನಾಡಿನಲ್ಲಿ ಪ್ರಾರಂಭ ದೆಸೆಯಲ್ಲಂತೂ 'ರೋಮುಕ ಶಾಂತಿ' ಯಿತ್ತು. ಸ್ಥಿರತೆ, ಭದ್ರತೆ ಇತ್ತು. ಅದರಿಂದ ವ್ಯಾಪಾರ ಬೆಳೆಯಿತು. ರೋಮುಕ ಪೌರತ್ವಾಧಿಕಾರ (ನಾಗರಿಕ ಹಕ್ಕು) ಇಡೀ ರೋಂ ಸಾಮ್ರಾಜ್ಯಕ್ಕೇ ಇತ್ತು. ಆದರೆ ಗುಲಾಮರಿಗೂ ಇದಕ್ಕೂ ಏನೂ ಸಂಬಂಧವಿರಲಿಲ್ಲ. ಅಷ್ಟೇ ಅಲ್ಲ, ಚಕ್ರವರ್ತಿ ಸರ್ವಶಕ್ತ. ಜನರಿಗೇನೂ ಅಧಿಕಾರವಿರಲಿಲ್ಲ – ಇದನ್ನೂ ನೆನಪಿಡು. ರಾಜಕೀಯ ಚರ್ಚೆಯೆಂದರೆ ಚಕ್ರವರ್ತಿಗೆ ದ್ರೋಹವೆಂದು ತಿಳಿಯುತ್ತಿದ್ದರು. ಮೇಲಂತಸ್ತಿನ ಜನಕ್ಕೆ ಪರವಾಯಿಲ್ಲ, ಕ್ರಮವಾದ ಆಡಳಿತ, ಒಂದು ನ್ಯಾಯ ವ್ಯವಸ್ಥೆ ಇತ್ತು. ಹಿಂದೆ ಪೂರಾ ನಿರಂಕುಶಾಧಿಕಾರಕ್ಕೆ ತುತ್ತಾಗಿ ನೊಂದಿದ್ದ ಜನಕ್ಕೆ ಇದೇ ಎಷ್ಟೋ ಲಾಭ ಅನಿಸಿರಬೇಕು.

ಬರಬರುತ್ತ ರೋಮುಕರು ಸೋಮಾರಿಗಳಾದರು. ಕದನ ಕೌಶಲ ಕಡಮೆಯಾಯಿತು. ಸೇನೆಗೆ ಉಪಯೋಗವಿಲ್ಲದಾದರು. ತೆರಿಗೆಯ ಭಾರದಿಂದ ರೈತರು ಬಡತನದ ಪಾಲಾದರು. ನಗರವಾಸಿಗಳಿಗೂ ಅದೇ ಗತಿಯಾಯ್ತು. ಆದರೆ ನಗರವಾಸಿಗಳನ್ನು ಸಂತುಷ್ಟಚಿತ್ತರಾಗಿಡಬೇಕೆಂದು ಚಕ್ರವರ್ತಿಗಳಿಗಾಸೆ; ಇಲ್ಲದಿದ್ದರೆ ತಮಗೆ ತೊಂದರೆಕೊಟ್ಟಾರೆಂಬ ಭಯ. ಅದರಿಂದ ರೋಂ ನಿವಾಸಿಗಳಿಗೆ ಅನ್ನವನ್ನು ಉಚಿತವಾಗಿ ಕೊಡುತ್ತಿದ್ದರು. ಕ್ರೀಡಾ ವಿನೋದಕ್ಕೂ

ಉಚಿತ ವ್ಯವಸ್ಥೆ ಮಾಡಿದ್ದರು. ಇದರಿಂದ ಅವರಿಗೇನೊ ಹರುಷವಿತ್ತಾಗಲಿ, ಹೀಗೆ ಎಷ್ಟುಕಡೆ ಮಾಡಲು ಸಾಧ್ಯ ? ಇವರಿಗೆ ಬಟ್ಟೆ ಹಿಟ್ಟು ಸಿಗಬೇಕಾದರೆ ಮತ್ತಾರಿಗೋ ಅಭಾವವಾಗಬೇಕಲ್ಲವೆ? ಮಿಶ್ರ ಇತ್ಯಾದಿ ದೇಶಗಳಲ್ಲಿ ಗುಲಾಮ ಜನರ ಮಡಿಲಲ್ಲಿ ದುಃಖ, ಸಂಕಟ ತುಂಬಿ ಇವರಿಗೆ ಅನುಕೂಲ ಮಾಡಬೇಕಾಗಿತ್ತು. ರೋಮಕರು ಸೇನೆಗೆ ಸೇರದುದರಿಂದ ಸಾಮ್ರಾಜ್ಯ ನಿವಾಸಿಗಳಲ್ಲದ ಅನಾಗರಿಕ ಜನರನ್ನು – ಅವರನ್ನು ಹಾಗೆ ಕರೆಯುವುದು ಇವರ ರೂಢಿ – ಸೇನೆಯಲ್ಲಿ ತುಂಬಬೇಕಾಯಿತು. ರೋಮಿನ ವೈರಿಗಳು ಅನಾಗರಿಕ ನಾಯಕರು. ಬರಬರುತ್ತ ರೋಮಿನ ಸೇನೆಯು ತುಂಬಾ ವೈರಿಪಕ್ಷದ ಜನರೇ ಆಗಿಬಿಟ್ಟರು. ಗಡಿನಾಡಿನಲ್ಲಿ ಈ ಅನಾಗರಿಕರ ಧಾಂಧಲೆ ಇದ್ದೇ ಇತ್ತು; ರೋಮಕರನ್ನು ಹಿಂದಕ್ಕೆ ತರಬುತ್ತಲೇ ಇದ್ದರು. ರೋಂ ದುರ್ಬಲವಾದಂತೆ ಅವರ ಬಲಬೆಳೆಯಿತು, ಸಾಹಸ ಹೆಚ್ಚಿತು. ಮೂಡಣ ದಿಕ್ಕಿನ ಗಡಿ ರೋಮಿಗೆ ಬಹುದೂರ; ಅದನ್ನು ಕಾಯುವುದು ಕಷ್ಟ; ಅಂತೂ ಅಪಾಯವೇ. ಅಗಸ್ಟಸ್ ಸೀಸರನ ತರುವಾಯ ೩೦೦ ವರುಷದ ಮೇಲೆ ಕಾನ್‌ಸ್ಟೆಂಟೈನ್ ಎಂಬ ಚಕ್ರವರ್ತಿ ಒಂದು ದೊಡ್ಡ ಕೆಲಸ ಮಾಡಿದ; ದೀರ್ಘ ಪರಿಣಾಮಕಾರಿಯಾದ ಕೆಲಸ. ರಾಜಧಾನಿಯನ್ನು ರೋಮಿನಿಂದ ಮೂಡಲಿಗೆ ಬದಲಿಸಿದ. ಮೆಡಿಟರೇನಿಯನ್‌ಗೂ ಕಪ್ಪು ಕಡಲಿಗೂ ನಡುವೆ ಬಾಸ್ಫರಸ್ ನದಿ; ಅದರ ದಡದಲ್ಲಿ ಬೈಜಾಂಟಿಯಂ ಎಂಬ ಪುರಾತನ ನಗರವಿತ್ತು. ಅದರ ಬಳಿ ಹೊಸ ನಗರ ಕಟ್ಟಿದ; ತನ್ನ ಹೆಸರನ್ನೆ ಇಟ್ಟ, ಕಾನ್‌ಸ್ಟಾಂಟಿನೋಪಲ್ ಎಂದು ಕರೆದ. ಹೊಸ ರೋಂ ಎಂದೂ ಅದನ್ನು ಕರೆಯುತ್ತಿದ್ದರು. ಮುಂದೆ ಅದೇ ರೋಮಕ ಸಾಮ್ರಾಜ್ಯದ ರಾಜಧಾನಿಯಾಯಿತು. ಈಗಲೂ ಏಷಿಯಾ ಖಂಡದ ಅನೇಕ ಪ್ರಾಂತಗಳಲ್ಲಿ ಅದನ್ನು ರೌಂ ಎಂದೇ ಕರೆಯುತ್ತಾರ.

೩೩

## ರೋಮ್ ಸಾಮ್ರಾಜ್ಯ ವಿನಾಶ

ಏಪ್ರಿಲ್ ೨೪, ೧೯೩೨

ರೋಮ್ ಸಾಮ್ರಾಜ್ಯದ ಸಿಂಹಾವಲೋಕನವನ್ನೇ ಇಂದು ಮುಂದುವರಿಸೋಣ. ಕ್ರಿ. ಶ. ೪ನೆ ಶತಮಾನದಾರಂಭದಲ್ಲಿ – ೩೨೬ ರಲ್ಲಿ – ಪುರಾತನ ಬೈಜಾಂಟಿಯಂ ನಗರದ ಬಳಿ ಕಾಂಸ್ಟಾಂಟಿನೋಪಲ್ ನಗರವನ್ನು ಸ್ಥಾಪಿಸಿದ ಕಾನ್‌ಸ್ಟೆಂಟೈನ್. ಬಾಸ್ಫರಸ್ ತೀರದ ಈ ಹೊಸ ರೋಮಿಗೆ ತನ್ನ ರಾಜಧಾನಿಯನ್ನು ಒಯ್ದ; ಈ ಕೊನೆಯಿಂದ ಆ ಕೊನೆಗೆ ನಕ್ಷೆ ನೋಡು. ಈ ಹೊಸ

ಊರು ಯುರೋಪಿನ ಅಂಚಿನಲ್ಲಿದೆ; ಪ್ರಬಲವಾದ ಏಸಿಯಾ ಖಂಡದ ಕಡೆ ನೋಡುತ್ತಿದ್ದಂತಿದೆ ; ಎರಡು ಭೂಖಂಡಗಳ ನಡುವೆ ಬಾಗಲಿದ್ದಂತಿದೆ. ಭೂಮಾರ್ಗವಾಗಿಯೂ ಜಲಮಾರ್ಗವಾಗಿಯೂ ಎಷ್ಟೋ ರಾಜಮಾರ್ಗಗಳಿಗೆ ಇದು ಆಧಾರವಾಗಿತ್ತು. ನಗರಕ್ಕಾಗಲಿ ರಾಜಧಾನಿಗಾಗಲಿ ಇದು ಸೊಗಸಾದ ಸ್ಥಳ. ಕಾನ್‌ಸ್ಟೆಂಟೈನೇನೋ ಸರಿಯಾಗಿಯೇ ಆರಿಸಿದ. ಆದರೆ ಈ ಸ್ಥಲಾಂತರಕ್ಕಾಗಿ ಅವನೋ ಅವನ ವಂಶದವರೋ ಬಹಳ ಕಷ್ಟನಷ್ಟ ಪಡಬೇಕಾಯಿತು. ಹಳೆಯ ರೋಂ ಏಸಿಯಾ ವೈರಿಗೂ ಪೂರ್ವಖಂಡಕ್ಕೂ ದೂರವಾಗಿದ್ದರೆ, ಹೊಸ ರೋಂ ಪಶ್ಚಿಮ ದೇಶಗಳಿಗೆ, ಗಾಲ್ ಬ್ರಿಟನ್‌ಗಳಿಗೆ ದೂರವಾಗಿತ್ತು.

ಈ ತೊಂದರೆ ತಪ್ಪಿಸಲು ಕೆಲವು ಕಾಲ ಇಬ್ಬರು ಚಕ್ರವರ್ತಿಗಳನ್ನು ಏರ್ಪಡಿಸಿದರು ; ಒಬ್ಬನು ಕಾನಸ್ಟಾಂಟಿನೋಪಲಿನಲ್ಲಿ, ಇನ್ನೊಬ್ಬನು ರೋಮಿನಲ್ಲಿ. ಇದರಿಂದ ಸಾಮ್ರಾಜ್ಯ ಪೂರ್ವ, ಪಶ್ಚಿಮ ಎರಡು ಭಾಗವಾದಂತಾಯಿತು. ರೋಂ ರಾಜಧಾನಿಯಾದ ಪಶ್ಚಿಮ ಸಾಮ್ರಾಜ್ಯಕ್ಕೆ ಈ ಪೆಟ್ಟು ಬಲವಾಗಿ ತಾಗಿತು ; ಅದು ಬಹುಕಾಲ ಬಾಳಲಿಲ್ಲ. ಅನಾಗರಿಕರೆಂದು ತಾ ಕರೆದ ಜನರನ್ನು ನಿಗ್ರಹಿಸಲು ಅದಕ್ಕೆ ಸಾಧ್ಯವಾಗಲಿಲ್ಲ. ಜರ್ಮನ್ ಗೋತ್ರದ ಗಾಥ್ ಕುಲದವರು ನುಗ್ಗಿ ಬಂದು ರೋಮನ್ನು ನಾಶ ಮಾಡಿದರು ; ತರುವಾಯ ವ್ಯಾಂಡಲರು ಹೂಣರು ಬಂದರು. ಪಶ್ಚಿಮ ಸಾಮ್ರಾಜ್ಯ ಬಿದ್ದುಹೋಯಿತು. ಹೂಣ ಶಬ್ದವನ್ನು ನೀ ಕೇಳಿರಬೇಕು. ಜರ್ಮನರು ತುಂಬಾ ಕಠೋರರು, ಅನಾಗರಿಕರು ಎನ್ನಲು ಸಾಧಾರಣವಾಗಿ ಈ ಶಬ್ದವನ್ನು ಇಂಗ್ಲಿಷರು ಕಳೆದ ಮಹಾಯುದ್ಧದಲ್ಲಿ ಬಳಸುತ್ತಿದ್ದರು. ಯುದ್ಧಕಾಲದಲ್ಲಿ ಹೆಚ್ಚು ಕಡಮೆ ಎಲ್ಲರಿಗೂ ಹಾಗೆಯೆ ; ತಲೆ ಸಮವಾಗಿರದು ; ತಾವು ಕಲಿತ ಸದ್ಗುಣ ನಾಗರಿಕತೆ ಎಲ್ಲವನ್ನೂ ಪೂರಾ ಮರೆತು ಕ್ರೂರಿಗಳಂತೆ ಅನಾಗರಿಕರಂತೆ ನಡೆಯುತ್ತಾರೆ. ಜರ್ಮನರು ಹೀಗೆ ನಡೆದರು ; ಇಂಗ್ಲಿಷರು ಫ್ರೆಂಚರು ಸಹ ಹೀಗೆಯೇ ನಡೆದರು. ಈ ವಿಷಯದಲ್ಲಿ ಇವರು ಮೇಲು, ಅವರು ಮೇಲು ಅನ್ನುವ ಹಾಗಿಲ್ಲ.

ಹೂಣ ಎಂದರೆ ಅತಿ ದುಷ್ಟ ಎಂಬರ್ಥ ಬಂದಿದೆ. ವ್ಯಾಂಡಲ್ ಎಂದರೂ ಅಷ್ಟೆ. ಪ್ರಾಯಶಃ ಹೂಣರೂ ವ್ಯಾಂಡಲರೂ ಕೊಂಚ ಗಡಸು, ಕ್ರೂರ ಸ್ವಭಾವದವರಾಗಿದ್ದಿರಬೇಕು ; ಕೈಗೆ ಸಿಕ್ಕಿದುದನ್ನು ಹಾಳು ಮಾಡಿರಬೇಕು. ಆದರೆ ನಾವು ಒಂದು ಮಾತು ಮರೆಯಬಾರದು. ಇವರ ಬಗ್ಗೆ ನಮಗೆ ಗೊತ್ತಿರುವ ಕತೆಗಳೆಲ್ಲ ಅವರ ವೈರಿಗಳಾದ ರೋಮಕರು ಹೇಳಿದ್ದು. ಆದರಲ್ಲಿ ನಿಷ್ಪಕ್ಷಪಾತತನ ಇರುವ ಸಂಭವ ಕಡಮೆ. ಅಂತೂ ಗಾಥರು- ಹೂಣರು ವ್ಯಾಂಡಲರು ಪಶ್ಚಿಮ ರೋಂ ಸಾಮ್ರಾಜ್ಯವನ್ನು ಸುಲಭವಾಗಿ ನಾಶ ಮಾಡಿದರು. ಸಾಮ್ರಾಜ್ಯ ಭಾರದಿಂದ ರೋಮಕ ರೈತ ಶೀರಾ ಬಡವನಾಗಿದ್ದ; ತೆರಿಗೆ ಬಹಳ, ಮುಳುಗುವಷ್ಟು ಸಾಲ ; ಹೀಗಾಗಿ ರಾಜ್ಯಭಾರದಲ್ಲಿ ಏನು ವ್ಯತ್ಯಾಸವಾದರೂ

ತರಿಗೆ ಸಂತೋಷಕರವೇ ಆಗಿತ್ತು. ಬಡತನ, ಸಂಕಟದಲ್ಲಿ ಮುಳುಗಿರುವ ರತೀಯ ಕರ್ಷಕನಿಗೆ ಅನಿಸುವುದಿಲ್ಲವೆ, ಸ್ವಲ್ಪ ಏನಾದರೂ ವ್ಯತ್ಯಾಸವಾದರೂ ಕು ಎಂದು ; ಹಾಗೆಯೆ. ರೋಂ ಅನಾಯಾಸವಾಗಿ ಶತ್ರುವಶವಾಗಲು ಟು ಒಂದು ಮುಖ್ಯ ಕಾರಣ.

ಪಶ್ಚಿಮ ರೋಂ ಸಾಮ್ರಾಜ್ಯ ಹೀಗೆ ಹಾಳಾಯಿತಲ್ಲ. ನೂರಾರು ವರ್ಷ ದ ಮೇಲೆ ಇನ್ನೊಂದು ರೂಪ ತಾಳಿ ಮತ್ತೆ ತಲೆಯೆತ್ತಿತು. ಪೂರ್ವ ಮ್ರಾಜ್ಯಕ್ಕೂ ಹೂಣರ, ಉತ್ತರದ ಧಾಳಿಯನ್ನು ನಿಗ್ರಹಿಸುವುದು ಬಲು ಕಷ್ಟ ಗಿತ್ತಾಗಲಿ ಹೇಗೋ ತಡೆದು ಬದುಕಿಕೊಂಡಿತು. ಇತ್ತ ಈ ಧಾಳಿಗಳನ್ನ ರಿಸಬೇಕು, ಅತ್ತ ಅರಬರೊಡನೆ ತುರುಕರೊಡನೆ ಯುದ್ಧ ಮಾಡಬೇಕು— ೆ ನೂರಾರು ವರ್ಷ ಕಷ್ಟದಲ್ಲೇ ಪೂರ್ವದ ಸಾಮ್ರಾಜ್ಯ ಬಾಳಿಕೊಂಡು ಬಂತು. ೦ ವರ್ಷದಷ್ಟು ದೀರ್ಘಕಾಲ ಬಾಳಿ, ಕ್ರಿ. ಶ. ೧೪೫೩ ರಲ್ಲಿ ಆಟೊಮನ್ ುಕರು ಅಥವ ಉಸ್ಮಾನಿಗಳು ಕಾನ್‌ಸ್ಟಾಂಟಿನೋಪಲನ್ನು ವಶಪಡಿಸಿ ಂಡಾಗ ಈ ಸಾಮ್ರಾಜ್ಯ ಸಂದುಹೋಯಿತು. ಅಂದಿನಿಂದ ಇಂದಿನ ತನಕ, ೫೦೦ ವರ್ಷ ಕಾನ್‌ಸ್ಟಾಂಟಿನೋಪಲ್ - ಇಸ್ತಾನ್‌ಬೂಲ್ ಎನ್ನುತ್ತಾರೆ ನ್ನೀಗ ತುರುಕರ ಕೈಯಲ್ಲಿದೆ. ಅಲ್ಲಿಂದ ಯೂರೋಪಿಗೆ ದಾಳಿಯಿಟ್ಟರು ುಕರು ; ಮತ್ತೆ ಮತ್ತೆ ಆಸ್ಟ್ರಿಯಾದ ವಿಯನ್ನಾದ ವರೆಗೂ ಬಂದರು. ಂಗ ಕಾಲಕಾಲಕ್ಕೆ ಅವರನ್ನು ಉಳಿದವರು ಹಿಂದಕ್ಕಟ್ಟಿದರು. ಕಡೆಗೆ ಮಯುದ್ಧದಲ್ಲಿ ಸೋತು, ೧೨ ವರ್ಷದ ಕೆಳಗೆ, ಕಾನ್‌ಸ್ಟಾಂಟಿನೋಪಲನ್ನೂ ುಕೊಂಡಂತಾಗಿತ್ತು. ಊರು ಇಂಗ್ಲಿಷರ ವಶವಾಗಿತ್ತು. ಟರ್ಕಿ ್ತಾನ ಅವರ ಕೈಗೊಂಬೆಯಾಗಿದ್ದ. ಆದರೆ ಮಹಾನಾಯಕ ಮುಸ್ತಫಾ ಾಲ್ ಪಾಷಾ ತನ್ನ ನಾಡಿಗರ ನೆರವಿಗೆ ಮುಂದೆ ಬಂದ ; ಕಲಿತನದಿಂದ ರಾಡಿ ಗೆದ್ದ. ಇಂದು ತುರ್ಕಿಸ್ತಾನ ಪೂರ್ಣ ಪ್ರಜಾತಂತ್ರ, ಸುಲ್ತಾನ ದಿಗೂ ಇಲ್ಲದಂತೆ ಮಾಯವಾಗಿ ಹೋದ. ಪ್ರಜಾತಂತ್ರಕ್ಕೆ ಕಮಾಲ ನೇ ಅಧ್ಯಕ್ಷ.* ೧೫೦೦ ವರ್ಷ, ಮೊದಲು ಪೂರ್ವ ರೋಮಿಗೆ, ಆಮೇಲೆ ಗೆ ರಾಜಧಾನಿಯಾಗಿದ್ದ ಕಾನ್‌ಸ್ಟಾಂಟಿನೋಪಲ್ ಈಗಲೂ ತುರ್ಕಿ ಕ್ಕೇ ಸೇರಿದೆ. ಆದರೆ ಅದರ ರಾಜಧಾನಿಯಲ್ಲ. ಹಿಂದಿನ ಸಾಮ್ರಾಜ್ಯ ರೆಯ ಸ್ಪರ್ಶವೆ ಇಲ್ಲದಂತೆ ಹೊಸದಾಗಿ ಏಶಿಯಾ ಮೈನರಿನಲ್ಲಿ ಅಂಗೋರಾ ಅರಾ) ದಲ್ಲಿ ತಮ್ಮ ರಾಜಧಾನಿ ಮಾಡಿಕೊಂಡಿದಾರೆ.

ದರ ಹಿಂದೊಂದು ಚಿತ್ರ ಬಂದ ಪರಿವರ್ತನ, ಕಾನ್‌ಸ್ಟಾಂಟಿನೋಪಲ್ ), ರೋಮಿನಿಂದ ಅಲ್ಲಿಗೆ ರಾಜಧಾನಿಯು ಪಲ್ಲಟ ..೨೦೦೦ ವರ್ಷದ ಇತಿ

ಮಾಲ ಪಾಷಾ ೧೯೩೮ ರಲ್ಲಿ ತೀರಿಕೊಂಡ.

ಹ್ರಾಸವನ್ನು ಬೇಗಬೇಗ ಸಿಂಹಾವಲೋಕನ ಮಾಡಿದ್ದೇನೆ. ಕಾನ್‌ಸ್ಟೆಂಟೈನ್ ಇನ್ನೂ ಒಂದು ಹೊಸ ಕೆಲಸ ಮಾಡಿದ; ಕ್ರಿಸ್ತಾನ ಮತವನ್ನವಲಂಬಿಸಿದ. ಚಕ್ರವರ್ತಿ ಕ್ರಿಸ್ತಾನನಾದರೆ ಕ್ರಿಸ್ತಾನ ಧರ್ಮ ರಾಜಧರ್ಮವಾದಂತೆ, ಸಾಮ್ರಾಜ್ಯ ಧರ್ಮವಾದಂತೆ. ಮೂರು ದಿವಸದ ಕೆಳಗೆ ಕ್ರಿಸ್ತಾನಮತ ತಿರಸ್ಕೃತ ಧರ್ಮ, ಅದಕ್ಕೆ ಸೇರಿದವರಿಗೆ ಹಿಂಸೆ ಕೊಡುತ್ತಿದ್ದರು. ಈಗ ಅದೇ ಸಾಮ್ರಾಜ್ಯ ಧರ್ಮವಾಗಿ ಹೋಯಿತು. ಈ ಆಕಸ್ಮಿಕ ಪರಿವರ್ತನೆ ಬಲು ಸೋಜಿಗವಾಗಿದ್ದಿರಬೇಕು. ಈ ವ್ಯತ್ಯಾಸದಿಂದ ಕ್ರಿಸ್ತಧರ್ಮಕ್ಕೆ ಕೆಲವು ಕಾಲ ಹಿತವಾಗಲಿಲ್ಲ. ಕ್ರಿಸ್ತಾನರಲ್ಲಿ ಕೆಲವು ಬಣಗಳಿವೆ. ಅವರವರಲ್ಲಿ ಜಗಳಕ್ಕೆ ಪ್ರಾರಂಭವಾಯಿತು. ಕೊನೆಗೆ ಲ್ಯಾಟಿನ್ ಬಣಕ್ಕೂ ಗ್ರೀಕ್ ಬಣಕ್ಕೂ ಸಂಬಂಧವೇ ತಪ್ಪಿಹೋಗುವಷ್ಟಾಯಿತು. ಲ್ಯಾಟಿನ್ ಗುಂಪಿಗೆ ರೋಂ ಪ್ರಧಾನ ಕ್ಷೇತ್ರ, ರೋಮಿನ ಬಿಷಪ್ಪೇ ಅವರ ಧರ್ಮಾಧಿಕಾರಿ. ಈ ಬಿಷಪ್ಪೇ ಮುಂದೆ ಪೋಪ್ ಆದದ್ದು.* ಗ್ರೀಕ್ ಗುಂಪಿನ ಕ್ಷೇತ್ರ ಕಾನ್‌ಸ್ಟಾಂಟಿನೋಪಲ್. ಲ್ಯಾಟಿನ್ ಚರ್ಚ್ ಪಶ್ಚಿಮೋತ್ತರ ಯುರೋಪಿನಲ್ಲೆಲ್ಲ ಹಬ್ಬಿ ರೋಮನ್ ಕ್ಯಾಥೊಲಿಕ್ ಚರ್ಚ್ ಎಂದು ಹೆಸರಾಯಿತು. ಗ್ರೀಕ್ ಚರ್ಚ್ ಸಂಪ್ರದಾಯಾನುಸಾರಿಯವರ ಪುರಾತನ ಮತವೆಂದಾಯಿತು. ಪೂರ್ವ ರೋಮಕ ಸಾಮ್ರಾಜ್ಯ ಪತನಾನಂತರ ಪುರಾತನ ಮತಕ್ಕೆ ರಷ್ಯಾ ಆಶ್ರಯಸ್ಥಾನವಾಯಿತು. ಈಗ ರಷ್ಯಾದಲ್ಲಿ ಆ ಮತವೂ ಇಲ್ಲ, ಈ ಮತವೂ ಇಲ್ಲ, ಬರೀ ಬೋಲ್ಷೆವಿಸಂ.

ಪೂರ್ವ ರೋಮಕ ಸಾಮ್ರಾಜ್ಯ ಎಂದೆನಲ್ಲ ಇದಕ್ಕೂ ರೋಮಿಗೂ ಸಂಬಂಧವೇನೂ ಇರಲಿಲ್ಲ. ಲ್ಯಾಟಿನ್ ಭಾಷೆಯನ್ನು ಸಹ ಆಡುತ್ತಿರಲಿಲ್ಲ ಇವರು; ಇವರ ನುಡಿ ಗ್ರೀಕ್. ಒಂದು ರೀತಿಯಲ್ಲಿ ಸಿಕಂದರನ ಗ್ರೀಕ್ ಸಾಮ್ರಾಜ್ಯದ ಕುಡಿಯೊಡೆದಂತೆ ಇದು ಎನ್ನಬಹುದು. ಪಶ್ಚಿಮ ದೇಶಗಳು ತನಗಧೀನವಾಗಿರಬೇಕಾಗಿಲ್ಲವೆಂಬುದನ್ನು ಈ ಪೂರ್ವ ಸಾಮ್ರಾಜ್ಯ ಒಪ್ಪಲಿಲ್ಲ. ಆದರೆ ನಿಜವಾಗಿ ಪಶ್ಚಿಮ ದೇಶಗಳಿಗೂ ಇದಕ್ಕೂ ಯಾವ ಸಂಬಂಧವೂ ಇರಲಿಲ್ಲ. ಹೀಗಿದ್ದರೂ ರೋಮನ್ ಪೂರ್ವ ಸಾಮ್ರಾಜ್ಯ ಎಂಬ ಹೆಸರನ್ನು ಮಾತ್ರ ಬಿಡಲಿಲ್ಲ. ಆ ಶಬ್ದದಲ್ಲಿ ಏನೋ ಮಂತ್ರ ಶಕ್ತಿಯಿದೆಯೆಂಬ ಭಾವನೆ ಅವರಿಗೆ. ಜನಕ್ಕೆ ರೋಮಕರೆಂದೇ ಹೆಸರಿಟ್ಟರು. ಇದಕ್ಕಿಂತಲೂ ವಿಚಿತ್ರವಾದ್ದೆಂದರೆ—ಸಾಮ್ರಾಜ್ಯದ ರಾಜಧಾನಿ ಪದವಿ ನಷ್ಟವಾದರೂ ರೋಂ ನಗರದ ಗೌರವ ತಗ್ಗಲಿಲ್ಲ; ಅದನ್ನು ಗೆದ್ದ ಅನಾಗರಿಕ ಜನರಿಗೂ ರೋಂ ಎಂದರೆ ಏನೋ ಭಯ, ಏನೋ ಗೌರವ. ವಿಚಾರದ ಬಲ ಅಂಥದು; ದೊಡ್ಡ ಹೆಸರಿನ ಶಕ್ತಿ ಅಂಥದು.

---

* ಚರ್ಚ್ ನಮ್ಮಲ್ಲಿ ಮಠವಿದ್ದ ಹಾಗೆ; ಬಿಷಪ್ [illegible]

ಹಳೆಯ ಸಾಮ್ರಾಜ್ಯ ಕಳೆದುಕೊಂಡು ರೋಂ ಹೊಸರೀತಿಯ ಹೊಸ ಸಾಮ್ರಾಜ್ಯವೊಂದನ್ನು ಕಟ್ಟಲಾರಂಭಿಸಿತು. ಯೇಸು ಕ್ರಿಸ್ತನ ಪಟ್ಟಶಿಷ್ಯ ಪೇತ್ರನೇ ರೋಮಿಗೆ ಬಂದನೆಂದೂ, ಅಲ್ಲಿ ಪ್ರಥಮ ಮಠಪತಿಯಾದನೆಂದೂ ವದಂತಿ ಹುಟ್ಟಿತು. ಇದರಿಂದ ಕ್ರಿಸ್ತಾನರೆಷ್ಟೋ ಜನಕ್ಕೆ ರೋಮಿನ ಪವಿತ್ರತೆ ಇಮ್ಮಡಿಸಿತು; ಆ ಮಠದ ಗೌರವ ಬೆಳೆಯಿತು. ಮೊದಮೊದಲು ರೋಂ ಬಿಷಪ್ ಎಲ್ಲ ಬಿಷಪ್ಪರ ಹಾಗೇ ಸಾಮಾನ್ಯನಾಗಿದ್ದ. ಆದರೆ ಚಕ್ರವರ್ತಿ ಕಾನ್‌ಸ್ಟಾಂಟಿನೋಪಲ್ ವಾಸಕ್ಕೆ ಹೊರಟು ಹೋದ ಮೇಲೆ ರೋಮಿನ ಬಿಷಪ್ಪನ ಪ್ರಾಮುಖ್ಯತೆ ಬೆಳೆಯಿತು. ಆತನಿಗಿಂತ ಹೆಚ್ಚಿನವರು ಯಾರೂ ಆಗ ಅಲ್ಲಿರಲಿಲ್ಲ; ಸಾಲದ್ದಕ್ಕೆ ಪೇತ್ರನ ಪೀಠ; ಉಳಿದ ಬಿಷಪ್ಪರಿಗೆ ನಾಯಕನಾದ. ಕ್ರಮೇಣ ಪೋಪ್ ಆದ. ಇಂದಿಗೂ ಈ ಪೋಪ್ ಇದ್ದಾನೆ, ರೋಮನ್ ಕೆಥೊಲಿಕ್ ಮಠಕ್ಕೆ ಗುರುವಾಗಿದಾನೆ; ನೀ ಬಲ್ಲೆ.

ಈ ರೋಮನ್ ಮಠಕ್ಕೂ ಪುರಾತನ ಗ್ರೀಕ್ ಮಠಕ್ಕೂ ಜಗಳ ಬಂದು ಎರಡೂ ಬೇರೆಯಾದವು. ಕಾರಣಗೊತ್ತೆ? ವಿಗ್ರಹ ಪೂಜೆ. ವಿಚಿತ್ರವಾಗಿಲ್ಲವೆ! ರೋಮಿನ ಮಠದಲ್ಲಿ ವಿಗ್ರಹ ಪೂಜೆಗೆ ಪ್ರೋತ್ಸಾಹವಿತ್ತು; ಸಾಧು ಸಂತರ, ಅದರಲ್ಲೂ ಯೇಸು ಕ್ರಿಸ್ತನ ತಾಯಿ ಮೇರಿಯ ಪೂಜೆಗೆ ಪ್ರಾಧಾನ್ಯವಿತ್ತು. ಗ್ರೀಕ ಮಠ ಈ ಸಂಪ್ರದಾಯಕೆ ಪ್ರಬಲ ವಿರೋಧಿ.

ಉತ್ತರ ದೇಶದ ಕಾಡು ಜನರ ನಾಯಕರು ಬಹುಕಾಲ, ಪರಂಪರೆಯಾಗಿ ರೋಮನ್ನು ಆಳಿದರು. ಅವರೂ ಸಹ ಕಾನ್‌ಸ್ಟಾಂಟಿನೋಪಲಿನಲ್ಲಿದ್ದ ಚಕ್ರವರ್ತಿಯ ಸಾರ್ವಭೌಮತ್ವವನ್ನು ಒಪ್ಪಿದ್ದರು. ಈ ಮಧ್ಯೆ ರೋಂ ಬಿಷಪ್ಪನ ಪ್ರಾಬಲ್ಯ ಹೆಚ್ಚಿ ಚಕ್ರವರ್ತಿಯನ್ನೂ ತಿರಸ್ಕರಿಸುವಷ್ಟು ಬಲವಾದ. ವಿಗ್ರಹ ಪೂಜೆಯ ಜಗಳ ಬಂದಾಗ ರೋಮಿಗೆ ಪೂರ್ವದೇಶದ ಸಂಬಂಧವೇ ಇಲ್ಲದಂತೆ ಮಾಡಿದ ಬಿಷಪ್. ಇಷ್ಟರೊಳಗಾಗಿ ಎಷ್ಟೋ ಹೊಸ ಸಂಗತಿ ನಡೆದಿದ್ದವು: ಅರಬಸ್ತಾನದಲ್ಲಿ ಇಸ್ಲಾಂ ಎಂಬ ಹೊಸ ಮತ ಹುಟ್ಟಿಕೊಂಡಿತು; ಅರಬರು ಉತ್ತರ ಆಫ್ರಿಕ, ಸ್ಪೆಯಿನ್‌ಗಳನ್ನು ಕೊಳ್ಳೆಹೊಡೆದು ಮಧ್ಯ ಯೂರೋಪಿಗೇ ಈಗ ಗುರಿಯಿಟ್ಟಿದ್ದರು; ಪಶ್ಚಿಮೋತ್ತರ ಯೂರೋಪಿನಲ್ಲಿ ಹೊಸ ಹೊಸ ರಾಜ್ಯ ಹುಟ್ಟುತ್ತಿದ್ದವು; ಪೂರ್ವ ರೋಂ ಸಾಮ್ರಾಜ್ಯವನ್ನು ಅರಬರು ಬಲವಾಗಿ ಮುತ್ತಿದ್ದರು. ಮುಂದೆ ಈ ವಿಷಯ ಪ್ರಸ್ತಾಪಿಸುತ್ತೇನೆ.

ಪೋಪನಿಗೆ ನೆರವು ಬೇಕಾಯಿತು. ಉತ್ತರದ ಜರ್ಮನ್ ಕುಲಕ್ಕೆ ಸೇರಿದ ಫ್ರಾಂಕ್‌ಜನರ ನಾಯಕನ ಸಹಾಯ ಬೇಡಿದ. ಕೆಲವು ಕಾಲದ ಮೇಲೆ ಫ್ರಾಂಕರ ನಾಯಕ ಕಾರ್ಲ್ ಅಥವ ಚಾರಲ್ಸ್ ರೋಮಿನಲ್ಲಿ ಪಟ್ಟಾಭಿಷಿಕ್ತನಾದ. ಈ ಸಾಮ್ರಾಜ್ಯ ಹೊಸದು. ಆದರೆ ರೋಮಕ ಸಾಮ್ರಾಜ್ಯವೆಂಬ ಹೆಸರೇನೋ ತಪ್ಪಲಿಲ್ಲ. ಕ್ರಮೇಣ 'ಪವಿತ್ರವಾದ ರೋಮಕ ಸಾಮ್ರಾಜ್ಯ'

ನೆನಿಸಿಕೊಂಡಿತು. ರೋಮುಕವಲ್ಲದ ಸಾಮ್ರಾಜ್ಯವೆಂಬುದು ಅವರಿಗೆ ಹೊಳೆಯುತ್ತಲೇ ಇರಲಿಲ್ಲ. ಚಾರ್ಲಮೇನ್ ಅಥವ ಮಹಾ ಚಕ್ರವರ್ತಿ ಚಾರಲ್ಸ್‌ಗೂ ರೋಮಿಗೂ ಏನೂ ಸಂಬಂಧವಿರದಿದ್ದರೂ ಅವನೂ ಇಂಪರೇಟರ್, ಸೀಸರ್, ಆಗಸ್ಟಸ್ ಆದ. ಹಳೆಯ ಸಾಮ್ರಾಜ್ಯದ ಪುನರವತಾರವೆಂದು ಅವರ ಭಾವನೆ. ಆ ಹೆಸರಿಗೊಂದು ವಿಶೇಷಣ ಮಾತ್ರ ಹೊಸದಾಗಿ ಸೇರಿತು. ಸಾಮ್ರಾಜ್ಯ 'ಪವಿತ್ರ' ವಾಗಿತ್ತು. ಕ್ರಿಸ್ತಾನ ಸಾಮ್ರಾಜ್ಯವಾದ್ದರಿಂದ, ಪೋಪನ ಧರ್ಮಪಿತೃತ್ವದ ಫಲವಾಗಿ, ಅದು ಪವಿತ್ರವಾಯಿತು.

ವಿಚಾರದ ವಿಚಿತ್ರಬಲ ಮತ್ತೆ ಕಂಡಿದೆ, ನೋಡು. ಮಧ್ಯ ಯುರೋಪಿನಲ್ಲಿ ಬಾಳುವ ಫ್ರಾಂಕ್ ಅಥವ ಜರ್ಮನ್ ದೊರೆ ರೋಮುಕ ಸಮ್ರಾಟನಾಗುತ್ತಾನೆ! ಈ 'ಪವಿತ್ರ' ಸಾಮ್ರಾಜ್ಯದ ಇತಿಹಾಸ ಇನ್ನೂ ವಿಲಕ್ಷಣವಾಗಿದೆ. ಹೆಸರಿಗೆ ಮಾತ್ರ ಸಾಮ್ರಾಜ್ಯವಾಯಿತು. ಕಾನ್‌ಸ್ಟಾಂಟಿನೋಪಲಿನಲ್ಲಿ ಪೂರ್ವ ಸಾಮ್ರಾಜ್ಯ ಹಾಗೆಯೇ ನಡೆಯುತ್ತ ಬಂತು ; ಈ ಪಶ್ಚಿಮ ಸಾಮ್ರಾಜ್ಯ ಮಾತ್ರ ನಾಲ್ಕು ದಿನ ಕಾಣಿಸಿ, ನಾಲ್ಕು ದಿನ ಮರೆಯಾಗಿ ಚಿತ್ರವಿಚಿತ್ರವಾಯಿತು. ರೋಮಿನ ಹೆಸರು, ಕ್ರಿಸ್ತಾನ ಮರ ಎರಡರ ಬಲದಿಂದ ಸಾಮ್ರಾಜ್ಯದ ಹೆಸರು ಮಾತ್ರ ಉಳಿದಿತ್ತು. ಬರೀ ಕಲ್ಪನೆಯ ಸಾಮ್ರಾಜ್ಯ; ನಿಜವಾಗಿ ಏನೂ ಇರಲಿಲ್ಲ. ವಾಲ್ಟೈರ್ ಇರಬೇಕು ಈ ಪವಿತ್ರ ರೋಮುಕ ಸಾಮ್ರಾಜ್ಯವನ್ನು ವರ್ಣಿಸಿದ್ದು; ಇದು ಪವಿತ್ರವೂ ಅಲ್ಲ, ರೋಮುಕವೂ ಅಲ್ಲ, ಸಾಮ್ರಾಜ್ಯವೂ ಅಲ್ಲ ಎಂದು. ನಮ್ಮ ದೇಶದಲ್ಲಿ ಪಿಡುಗಿನಂತೆ ಹರಡಿರುವ ಇಂಡಿಯನ್ ಸಿವಿಲ್ ಸರ್ವಿಸ್ಸನ್ನು ಹೀಗೆಯೇ ಯಾರೋ ವರ್ಣಿಸಿದ್ದರು. ಇದು ಇಂಡಿಯನ್ನೂ ಅಲ್ಲ, ಸಿವಿಲ್ ಮೊದಲೇ ಅಲ್ಲ, ಸರ್ವಿಸ್ಸಂತೂ ಅಲ್ಲವೇ ಅಲ್ಲ.

ಎಂಥದೇ ಆಗಲಿ, ಅಂತೂ ೧೦೦೦ ವರ್ಷಕಾಲ ಸಾಗಿಸಿಕೊಂಡು ಬಂತು ಈ ಪವಿತ್ರ ಸಾಮ್ರಾಜ್ಯ. ಮೊನ್ನೆಮೊನ್ನೆ, ನೂರು ವರ್ಷದ ಕೆಳಗೆ ನೆಪೋಲಿಯನ್ ಕಾಲದಲ್ಲಿ ಸಂಪೂರ್ಣವಾಗಿ ಅದು ಅಂತರಿಸಿದ್ದು. ಅದರ ಚರಮ ಪ್ರಕರಣದಲ್ಲಿ ಅಂಥ ವಿಶೇಷವೇನೂ ಇರಲಿಲ್ಲ. ಯಾರ ಗಮನಕ್ಕೂ ಬರಲಿಲ್ಲವೊ ಏನೋ ; ಅದಕ್ಕೆ ಮೊದಲೆ ಬಹು ಕಾಲದಿಂದ ಕಣ್ಮರೆಯಾಗಿತ್ತು. ಆದರೆ ಅದರ ಪ್ರೇತ ಮತ್ತೆ ಕೈಸರ್ ಆಗಿ, ಸಾರ್ ಆಗಿ ಎದ್ದು ಬಂದಿತು. ಕಳೆದ ಮಹಾಯುದ್ಧದಲ್ಲಿ, ೧೪ ವರ್ಷದ ಕೆಳಗೆ, ಇಂಥ ಪ್ರೇತರೂಪಗಳೆಷ್ಟೋ ಅಡಗಿ ಹೋದವು.

ತಲೆಯೆತ್ತಿದೆ. ಮಹಾಸಾಮ್ರಾಜ್ಯ, ಜಗತ್ಸಮ್ರಾಟರಲ್ಲ ; ದೇಶ ದೇಶವನ್ನು, ಜನಾಂಗ ಜನಾಂಗವನ್ನು, ಜನಶ್ರೇಣಿ ಜನಶ್ರೇಣಿಯನ್ನು ಕಿತ್ತು ತಿನ್ನದಂತೆ ಮಾಡುವ ಜಗತ್‌ಪ್ರಜಾಪ್ರಭುತ್ವದ ಕಲ್ಪನೆ. ಸಮೀಪ ಕಾಲದಲ್ಲಿ ಇಂಥ ದೇನಾದರೂ ಆದೀತೋ ಇಲ್ಲವೋ ಹೇಳುವುದು ಕಷ್ಟ. ಆದರೆ ಜಗತ್ತು ಕಲಸಂಬಟ್ಟೆಯಾಗಿರುವುದೇನೋ ನಿಜ. ಅದನ್ನೆಲ್ಲ ಸರಿಮಾಡಲು ಬೇರೆ ದಾರಿ ಯಾವುದೂ ಇದ್ದಂತೆ ತೋರದು.

ಉತ್ತರ ಯೂರೋಪಿನ 'ಅನಾಗರಿಕ'ರ ಪ್ರಸ್ತಾವ ಪದೇಪದೇ ಮಾಡಿ ದೇನೆ. ರೋಮಕರು ಇಟ್ಟ ಹೆಸರು ಅದು ; ನಾನಿಟ್ಟುದಲ್ಲ. ಮಧ್ಯ ಆಸಿಯಾದ ತಿರುಗಲ ತಿಪ್ಪಣ್ಣರಂತೆ ಈ ಜನರೂ ನೆರೆಹೊರೆಯ ಭಾರತೀಯರಷ್ಟು ರೋಮಕರಷ್ಟು ನಾಗರಿಕರಾಗಿರಲಿಲ್ಲ. ಆದರೆ ಇವರಿಗಿಂತ ಅವರು ಗಡಸು ಗಾರರು ; ಅವರ ಬದುಕೆಲ್ಲ ಹೆಚ್ಚಾಗಿ ಬಯಲಲ್ಲೆ ಸಾಗುತ್ತಿದ್ದುದು ಅದರ ಕಾರಣ. ಕೆಲವುಕಾಲಾನಂತರ ಅವರು ಕ್ರಿಸ್ತಾನರಾದರು. ರೋಮನ್ನು ಗೆದ್ದಾಗಲೂ ಕೂಡ ಅವರು ಬದ್ಧ ವೈರವನ್ನೇನು ಸಾಧಿಸಲಿಲ್ಲ. ಉತ್ತರ ಯೂರೋಪಿನಲ್ಲಿ ಈಗಿರುವ ಫ್ರಾಂಕರು ಗಾಥರು ಮೊದಲಾದ ಜನ ಆ 'ಅನಾಗರಿಕ'ರ ವಂಶದವರು.

ರೋಮಕ ಚಕ್ರವರ್ತಿಗಳ ಹೆಸರು ಹೇಳಲಿಲ್ಲವಲ್ಲವೆ. ಎಣಿಸಲಾರದಷ್ಟು ಜನ ಇದ್ದರು. ಒಬ್ಬರಿಬ್ಬರನ್ನು ಬಿಟ್ಟರೆ ಎಲ್ಲ ಚಕ್ರವರ್ತಿಗಳೂ ದುಷ್ಟರೇ. ಕೆಲವರಂತೂ ರಾಕ್ಷಸರು. ನೀರೋ ಹೆಸರು ನೀ ಕೇಳಿದೀಯೆ. ಅವನಿಗಿಂತ ಕೆಟ್ಟವರು ಎಷ್ಟೋ ಜನ ಇದ್ದರು. ಇರೇನೆ ಎಂಬ ಹೆಂಗಸೊಬ್ಬಳು ಚಕ್ರವರ್ತಿನಿಯಾಗಬೇಕೆಂದು ಚಕ್ರವರ್ತಿಯಾಗಿ ಆಳುತ್ತಿದ್ದ ತನ್ನ ಮಗನನ್ನೆ ಕೊಂದಳು. ಇದು ನಡೆದದ್ದು ಕಾನ್‌ಸ್ಟಾಂಟಿನೋಪಲಿನಲ್ಲಿ.

ರೋಂ ಚಕ್ರವರ್ತಿಗಳಲ್ಲಿ ಒಬ್ಬನು ಮಾತ್ರ ಎಲ್ಲರನ್ನೂ ಮೀರಿ ನಿಂತಿದಾನೆ. ಮಾರ್ಕಸ್ ಆರಿಲಿಯಸ್ ಅಂಟೋನಿಯಸ್. ಈತ ತತ್ವಜ್ಞಾನಿಯೆಂದು ಪ್ರತೀತಿ. ಈತನ ವಿಚಾರಲಹರಿಯ ಸಂಗ್ರಹದ ಗ್ರಂಥವೊಂದಿದೆ ; ಓದಬೇಕಾದ ಪುಸ್ತಕ. ಮಾರ್ಕಸ್ ಆರಿಲಿಯಸನ ಸದ್ಗುಣಕ್ಕೆ ಪ್ರತಿಯಾಗಿ ಅವನ ಮಗ ಅತಿ ದುಷ್ಟನಾದ ; ಅವನಂಥ ದುರಾತ್ಮ ರೋಮಿನಲ್ಲಿ ಮತ್ತಾರೂ ಹುಟ್ಟಲಿಲ್ಲ.

ರೋಂ ಸಾಮ್ರಾಜ್ಯದ ಪ್ರಾರಂಭದೆಸೆಯಲ್ಲಿ ೩೦೦ ವರ್ಷ ಕಾಲ ಪಶ್ಚಿಮ ಖಂಡಕ್ಕೆಲ್ಲ ರೋಮೇ ಕೇಂದ್ರವಾಗಿತ್ತು. ದೊಡ್ಡ ದೊಡ್ಡ ಕಟ್ಟಡಗಳು, ಸಾಮ್ರಾಜ್ಯದ ಎಲ್ಲ ಕಡೆಯಿಂದಲೂ ಹೊರಗಿನಿಂದಲೂ ಬರಹೋಗುವ ಜನ-ರೋಂ ಮಹಾನಗರವಾಗಿದ್ದಿರಬೇಕು. ಭೋಗ ಸಾಮಗ್ರಿ, ಅಪೂರ್ವ ಆಹಾರ ಪದಾರ್ಥ, ಅಮೂಲ್ಯ ವಸ್ತುಗಳು ಅನೇಕಾನೇಕ ಹಡಗುಗಳಲ್ಲಿ ಬರುತ್ತಿದ್ದವು.

ಮಿಶ್ರದೇಶದ ಕೆಂಪು ಕಡಲಿನ ಬಂದರೊಂದರಿಂದ ಪ್ರತಿವರ್ಷವೂ ಭಾರತಕ್ಕೆ ೧೨೦ ಹಡಗುಗಳ ದಳವೊಂದು ಹೋಗುತ್ತಿತ್ತಂತೆ. ಕಾರು ಮಳೆಯ ಗಾಳಿ ಬೀಸುವ ಕಾಲಕ್ಕೆ ಸರಿಯಾಗಿ ಅವರು ಪ್ರಯಾಣ ಮಾಡುತ್ತಿದ್ದರು ; ಆ ಗಾಳಿಯಿಂದ ಅವರಿಗೆ ಬಹಳ ಅನುಕೂಲವಾಗುತ್ತಿತ್ತು. ಸಾಧಾರಣವಾಗಿ ಅವರು ಹೋಗುತ್ತಿದ್ದುದು ದಕ್ಷಿಣ ಭಾರತಕ್ಕೆ. ತಮಗೆ ಬೇಕಾದ ಅಮೂಲ್ಯ ವಸ್ತು ಸಂಗ್ರಹ ಮಾಡಿಕೊಂಡು ಗಾಳಿಯ ಅನುಕೂಲ ನೋಡಿ ಮಿಶ್ರ ದೇಶಕ್ಕೆ ಹಿಂದಿರುಗುತ್ತಿದ್ದರು. ಮಿಶ್ರದಿಂದ ರೋಮಿಗೆ ಭೂಮಾರ್ಗವಾಗಿಯೂ ಜಲಮಾರ್ಗವಾಗಿಯೂ ಆ ವಸ್ತುಗಳು ಸಾಗಿಬರುತ್ತಿದ್ದವು.

ಈ ವ್ಯಾಪಾರವೆಲ್ಲ ಶ್ರೀಮಂತರ ಸುಖಕ್ಕಾಗಿ. ಒಬ್ಬರಿಬ್ಬರು ಶ್ರೀಮಂತರಾಗಿದ್ದರೆ, ಸಾವಿರಾರು ಜನ ಬಡವರಾಗಿದ್ದರು. ೩೦೦ ವರ್ಷ ರೋಂ ಸರ್ವಶ್ರೇಷ್ಠವಾಗಿತ್ತಲ್ಲವೆ ಪಶ್ಚಿಮ ದೇಶಗಳಲ್ಲಿ. ಮುಂದೆ ಕಾನ್‌ಸ್ಟಾಂಟಿನೋಪಲ್ ಹುಟ್ಟಿದ ಮೇಲೂ ಆ ಶ್ರೇಷ್ಠತೆ ತಪ್ಪಲಿಲ್ಲ. ಇಷ್ಟು ದೀರ್ಘಕಾಲವಾದರೂ ವಿಚಾರ ಲೋಕದಲ್ಲಿ ರೋಂ ಯಾವ ಮಹತ್ವದ ಸೃಷ್ಟಿಯನ್ನೂ ಮಾಡಲಿಲ್ಲ. ಪ್ರಾಚೀನ ಗ್ರೀಸ್ ಅಲ್ಪಕಾಲದಲ್ಲಿಯೆ ಮಹಾ ವಿಚಾರ ನಿರ್ಮಾಣ ಮಾಡಿತ್ತು. ನಿಜವಾಗಿಯೂ ರೋಮಕ ಸಂಸ್ಕೃತಿ ಯವನ ಸಂಸ್ಕೃತಿಯ ಛಾಯೆ ಮಾತ್ರ; ಮಸಕಾದ ನೆರಳು. ಒಂದರಲ್ಲಿ ಮಾತ್ರ ರೋಮಕರು ಮೇಲ್ಪಂಕ್ತಿ ಹಾಕಿದಂತಿದೆ ; ನ್ಯಾಯ ಶಾಸ್ತ್ರದಲ್ಲಿ ಯುರೋಪಿನ ನ್ಯಾಯಪದ್ಧತಿಗೆ ಅದೇ ತಳಹದಿ. ಈಗಲೂ ಪಶ್ಚಿಮ ದೇಶಗಳಲ್ಲಿ ವಕೀಲರು ರೋಮಕ ನ್ಯಾಯ ಶಾಸ್ತ್ರವನ್ನು ಕಲಿಯಲೇಬೇಕು.

ಬ್ರಿಟಿಷರು ತಮ್ಮ ಸಾಮ್ರಾಜ್ಯವನ್ನು ರೋಮಕ ಸಾಮ್ರಾಜ್ಯಕ್ಕೆ ಹೋಲಿಸಿ ಆತ್ಮತೃಪ್ತಿ ಪಡೆಯುವುದುಂಟು. ಎಲ್ಲ ಸಾಮ್ರಾಜ್ಯಗಳೂ ಹೆಚ್ಚು ಕಡಿಮೆ ಒಂದೇ ರೀತಿ. ಲೋಕವನ್ನು ಗಾಣವಾಡಿ ತಮ್ಮ ಪ್ರಭಾವ ಬೆಳಗಿಸುತ್ತವೆ. ಇದಲ್ಲದೆ ರೋಮಕರಿಗೂ ಇಂಗ್ಲಿಷರಿಗೂ ಸಾಮಾನ್ಯವಾದ ಗುಣ ಇನ್ನೊಂದಿದೆ---ಇಬ್ಬರೂ ಭಾವನಾಶಕ್ತಿ ಶೂನ್ಯರು ! ಬೆಚ್ಚಗೆ ಬದುಕಿ ಸ್ವಸಂತುಷ್ಟರಾಗಿ, ಜಗತ್ತು ತಮ್ಮ ಅನುಕೂಲಕ್ಕಾಗಿಯೆ ಸೃಷ್ಟಿಯಾಗಿದೆಯೆಂದು ನಿರ್ಧರಿಸಿ, ನಿಸ್ಸಂದೇಹರಾಗಿ ನಿರಾತಂಕವಾಗಿ ನಿಶ್ಚಿಂತೆಯಿಂದ ಬದುಕುತ್ತಾರೆ.

೩೯

# ಪಾರ್ಥಿಯ, ಸಾಸಾನಿದರು

ಏಪ್ರಿಲ್ ೨೬, ೧೯೩೨

ರೋಮನ್ ಸಾಮ್ರಾಜ್ಯವನ್ನೂ ಯುರೋಪನ್ನೂ ಬಿಟ್ಟು ಬೇರೆ ದೇಶಗಳಿಗೆ ತೆರಳೋಣ. ಏಷಿಯಾದಲ್ಲಿ ಏನು ನಡೆಯುತ್ತಿತ್ತೋ ವಿಚಾರಿಸಿ ಭಾರತ ಚೀನಾಗಳ ಕಡೆ ಮುಂದುವರಿಯಬೇಕು. ಎಷ್ಟೋ ಹೊಸ ದೇಶ ಇತಿಹಾಸದಲ್ಲಿ ತಲೆಹಾಕಿವೆ ಈಗ ; ಅವುಗಳ ವಿಷಯವನ್ನು ತಿಳಿದುಕೊಳ್ಳಬೇಕು. ಕಥೆ ಸಾಗಿದಂತೆಲ್ಲ ಎಷ್ಟೋ ಸ್ಥಳಗಳ ಬಗ್ಗೆ ಎಷ್ಟೋ ಹೇಳಬೇಕಾದೀತು, ಬೇಸತ್ತು ಕಥೆ ಹೇಳುವುದನ್ನೇ ನಾ ಬಿಟ್ಟೇನೋ ಏನೋ ?

ಒಂದು ಪತ್ರದಲ್ಲಿ ರೋಮನ್ ಪ್ರಜಾತಂತ್ರದ ಸೇನೆಗೆ ಪಾರ್ಥಿಯದಲ್ಲಿ ಕಾರ್ಹೆ ಕದನದಲ್ಲಿ ಆದ ಸೋಲಿನ ವಿಷಯ ಬರೆದಿದ್ದೆ. ಪಾರ್ಥಿಯರ ವಿಷಯ, ಈಗ ಪಾರ್ಸೀಸ್ತಾನ ಮೆಸಪೊಟೇಮಿಯ ಇರುವ ಕಡೆ ಅವರು ರಾಜ್ಯವೊಂದನ್ನು ಹೇಗೆ ಕಟ್ಟಿಕೊಂಡರೆಂಬ ಕತೆ ಹೇಳದಂತೆ, ಆಗ ಮುಂದೆಸಾಗಿದೆ. ಸಿಕಂದರನ ತರುವಾಯ ಅವನ ದಳಪತಿ ಸೆಲ್ಯೂಕಸ್ಸನೂ ಅವನ ವಂಶಜರೂ ಭಾರತದಿಂದ ಪಶ್ಚಿಮದಲ್ಲಿ ಏಷ್ಯಾ ಮೈನರ್‌ವರೆಗೂ ಹರಡಿದ ದೊಡ್ಡ ಸಾಮ್ರಾಜ್ಯವನ್ನು ಆಳಿದರು. ೩೦೦ ವರ್ಷ ಅವರ ವಶ ನಡೆಯಿತು. ತರುವಾಯ ಪಾರ್ಥಿಯನ್ ಎಂಬ ಮಧ್ಯ ಏಷ್ಯದ ಜನ ಬಂದು ಅವರನ್ನು ಓಡಿಸಿದರು. ಪರ್ಶಿಯವನ್ನೆ ಪಾರ್ಥಿಯ ಎನ್ನುತ್ತಿದ್ದರು ಆಗ. ಇವರೇ ರೋಮನ್ ಪ್ರಜಾಪ್ರಭುತ್ವವನ್ನು ಕೊನೆಕೊನೆಗೆ ಸೋಲಿಸಿದವರು ತರುವಾಯ ಬಂದ ರೋಮಕ ಸಾಮ್ರಾಜ್ಯ ಇವರನ್ನು ಪೂರ್ಣವಾಗಿ ಸೋಲಿಸಲೆ ಇಲ್ಲ. ೨೫೦ ವರ್ಷ ಇವರು ಪಾರ್ಥಿಯವನ್ನು ಆಳಿದರು, ದೇಶದೊಳಗಿನ ಕ್ರಾಂತಿಯೊಂದು ಹುಟ್ಟಿ ಅವರನ್ನು ಓಡಿಸುವವರೆಗೆ ಆಳಿದರು. ಈ ಪರದೇಶೀ ರಾಜರ ವಿರುದ್ಧ ಪಾರಸೀ ಜನರೇ ಬಂಡೆದ್ದು ತಮ್ಮ ಜಾತಿಧರ್ಮದವನೊಬ್ಬನಿಗೆ ಪಟ್ಟ ಕಟ್ಟಿದರು. ಮೊದಲನೆ ಅರ್ದಶೀರ್ ಆ ದೊರೆ. ಅವನ ವಂಶ ಸಾಸಾನಿದ್ ವಂಶ. ಅರ್ದಶೀರ್ ಜರಥುಷ್ಟ್ರ ಮತದ ಪರಮಭಕ್ತ. ಅದೇ ಪಾರಸೀ ಜನರ ಮತ, ನಿನಗೆ ನೆನಪಿದೆಯೆ ? ಇತರ ಮತಗಳಲ್ಲಿ ಅವನಿಗೆ ಅಷ್ಟು ಸಹನೆಯಿರಲಿಲ್ಲ. ಸಾಸಾನಿದರಿಗೂ ರೋಮ್ ಸಾಮ್ರಾಜ್ಯಕ್ಕೂ ಯುದ್ಧ ಸದಾ ಇದ್ದೇ ಇತ್ತು. ರೋಮನ್ ಚಕ್ರವರ್ತಿಯೊಬ್ಬನನ್ನು ಸೆರೆಹಿಡಿದು ಬಿಟ್ಟಿದ್ದರು. ಎಷ್ಟೋ ಸಲ ಪಾರಸೀ ಸೇನೆ ಕಾನ್‌ಸ್ಟೆಂಟಿನೋಪಲನ್ನು

ಮುಟ್ಟಿತ್ತು. ಒಮ್ಮೆ ಮಿಶ್ರದೇಶವನ್ನು ಗೆದ್ದುಬಿಟ್ಟರು. ಸಾಸಾನಿದ ಸಾಮ್ರಾಜ್ಯ ಜರಥುಷ್ಟ್ರ ಧರ್ಮ ಪಕ್ಷಪಾತದುತ್ಸಾಹಕ್ಕೆ ಬಲು ಪ್ರಸಿದ್ಧ. ಏಳನೇ ಶತಮಾನದಲ್ಲಿ ಇಸ್ಲಾಮ್ ಬಂದು ಸಾಸಾನಿದ್ ಸಾಮ್ರಾಜ್ಯಕ್ಕೂ ಅದರ ರಾಜಧರ್ಮಕ್ಕೂ ಮಂಗಳಾರತಿ ಮಾಡಿತು. ಈ ವ್ಯತ್ಯಾಸದಿಂದ ಪೀಡೆಯಾದೀತೆಂಬ ಹೆದರಿಕೆಯಿಂದ ಎಷ್ಟೋ ಜರಥುಷ್ಟ್ರ ಮತಾವಲಂಬಿಗಳು ದೇಶಬಿಟ್ಟು ಹಿಂದೂಸ್ಥಾನಕ್ಕೆ ಬಂದರು. ತನ್ನ ಬಳಿಗೆ ಆಶ್ರಯಕ್ಕೆಂದು ಬಂದವರಿಗೆಲ್ಲ ಸ್ವಾಗತ ಬಯಸಿದಂತೆ ಇವರಿಗೂ ಸ್ವಾಗತ ಕೊಟ್ಟಿತು ಭಾರತ. ಅವರ ಸಂತಾನವೇ ಈಗ ಹಿಂದುಸ್ಥಾನದಲ್ಲಿರುವ ಪಾರಸೀ ಜನ.

ಭಿನ್ನ ಧರ್ಮಗಳ ಸೈರಣೆಯ ವಿಷಯದಲ್ಲಿ ಇತರ ದೇಶಗಳೊಡನೆ ಭಾರತವನ್ನು ಹೋಲಿಸುವುದು ತೀರ ವಿಚಿತ್ರ, ಆಶ್ಚರ್ಯಕರ. ಅನೇಕ ಕಡೆ, ಅದರಲ್ಲಿಯೂ ಯೂರೋಪಿನಲ್ಲಿ ಹಿಂದಿನ ಕಾಲದಲ್ಲಿ ರಾಜಧರ್ಮವನ್ನು ಅವಲಂಬಿಸದಿದ್ದರೆ ಚಿತ್ರಹಿಂಸೆಗೆ ಗುರಿಯಾಗಬೇಕಿತ್ತು. ಎಲ್ಲೆಲ್ಲಿಯೂ ಬಲಾತ್ಕಾರ. ಯೂರೋಪಿನಲ್ಲಿ ನಡೆದ ಭಯಂಕರವಾದ ಧರ್ಮ ವಿಚಾರಣಾ ಸಭೆಗಳ, ಮಂತ್ರವಾದಿನಿಯರ ದಹನಗಳ ವಿಷಯ ನೀನು ಓದುತ್ತೀಯೆ. ಆದರೆ ಹಿಂದುಸ್ಥಾನದಲ್ಲಿ ಪೂರ್ವಕಾಲದಲ್ಲಿ ಸಂಪೂರ್ಣ ಧರ್ಮ ಸಹಿಷ್ಣುತೆ ಇತ್ತು. ಪಶ್ಚಿಮ ದೇಶಗಳಲ್ಲಿ ಆದ ಹಿಂಸಾಪೂರ್ಣ ಘರ್ಷಣದ ಮುಂದೆ ಹಿಂದೂ ಬೌದ್ಧ ಧರ್ಮಗಳಿಗಾದ ಅಲ್ಪ ಘರ್ಷಣ ಏನೂ ಅಲ್ಲ. ಇದನ್ನು ನೆನಪಿಡುವುದು ಒಳ್ಳೆಯದು. ಈಚೆಗೆ ದುರದೃಷ್ಟ ವಶದಿಂದ ನಮ್ಮಲ್ಲಿ ಜಾತಿ ಮತ ಕಲಹ ಬೆಳೆದಿದೆ. ನಮ್ಮ ಇತಿಹಾಸ ತಿಳಿಯುವ ಜನ ಕೆಲವರು ಯಾವಾಗಲೂ ಭಾರತದ ಹಣೆಯ ಬರಹ ಇದೇ ಏನೋ ಎಂದುಕೊಳ್ಳುತ್ತಾರೆ. ಇದು ಶುದ್ಧ ತಪ್ಪು. ಈ ದುರ್ಘಟನೆಗಳೆಲ್ಲ ಇತ್ತೀಚೆಗೆ ಬೆಳೆದವು. ಇಸ್ಲಾಂ ಹುಟ್ಟಿದ ಮೇಲೆ ಎಷ್ಟೋ ಶತಮಾನಗಳ ಕಾಲ ಹಿಂದುಸ್ಥಾನದ ಎಲ್ಲ ಪ್ರಾಂತಗಳಲ್ಲೂ ಮುಸಲ್ಮಾನರು ತಮ್ಮ ನೆರೆಹೊರೆಯವರೊಡನೆ ಸರಸವಾಗಿ ಬಾಳಿದರು. ವ್ಯಾಪಾರಿಗಳಾಗಿ ಬಂದಾಗ ಅವರಿಗೆ ಸ್ವಾಗತ ದೊರೆಯಿತು : ಇಲ್ಲೇ ನೆಲೆಸುವಂತೆ ಪ್ರೋತ್ಸಾಹ ದೊರೆಯಿತು. ಮುಂದಿನ ಕತೆ ಹೇಳುತ್ತಿದೇನಲ್ಲವೆ ಈಗಲೇ !

ಕ್ರಿ. ಶ. ೧ನೆ ಶತಮಾನದಲ್ಲಿ ರೋಮಿನಲ್ಲಿ ತಮಗಾದ ಚಿತ್ರಹಿಂಸೆಗೆ ಹೆದರಿ ಓಡಿಬಂದ ಯಹೂದ್ಯರಿಗೆ ಆಸರೆ ಕೊಟ್ಟ ಹಾಗೆಯೇ ಜರಥುಷ್ಟ್ರಾನುಯಾಯಿಗಳಿಗೂ ಸ್ವಾಗತ ನೀಡಿತು ಭಾರತ.

ಫಾರ್ಸಿಸ್ಥಾನದಲ್ಲಿ ಸಾಸಾನಿದರು ಆಳುತ್ತಿದ್ದಾಗ ಸಿರಿಯಾದ ಪಾಲ್ಮೈರಾದಲ್ಲಿ ಚಿಕ್ಕದೊಂದು ಮರಳುಗಾಡು ರಾಜ್ಯ ಪ್ರವರ್ಧಮಾನವಾಗಿತ್ತು. ಒಂದು

ಕ್ಷಣಕಾಲ ವಿಜೃಂಭಿಸಿತ್ತು. ಸಿರಿಯಾ ಮರಳುಗಾಡಿನ ನಡುವೆ ಪಾಲ್ಮೈರಾ, ವ್ಯಾಪಾರ ಕೇಂದ್ರವಾಗಿತ್ತು. ಈಗಲೂ ಕಾಣುವ ದೊಡ್ಡ ದೊಡ್ಡ ಅವಶೇಷಗಳಿಂದ ಆಗಿನ ಕಟ್ಟಡಗಳೆಷ್ಟು ಭವ್ಯವಾಗಿದ್ದವೋ ತಿಳಿಯುತ್ತದೆ. ಒಂದು ಕಾಲದಲ್ಲಿ ಜೆನೋಬಿಯ ಎಂಬ ಹೆಂಗಸು ಅದರ ರಾಣಿಯಾಗಿದ್ದಳು. ರೋಮನರು ಆಕೆಯನ್ನು ಸೋಲಿಸಿದರು ; ಕೈಗೆ ಬೇಡಿಹಾಕಿ ಕರೆದುಕೊಂಡು ಹೋದರು – ಮರ್ಯಾದೆಯಿಲ್ಲದ ಜನ !

ಕ್ರಿಸ್ತಶಕಾರಂಭದಲ್ಲಿ ಸಿರಿಯಾದೇಶ ಸುಖವಾಗಿತ್ತು. ಹೊಸ ಒಡಂಬಡಿಕೆಯಲ್ಲಿ ಈ ಪ್ರಸ್ತಾಪವಿದೆ. ರಾಜ್ಯಭಾರ ಸರಿಯಾಗಿರಲಿಲ್ಲ, ದೌರ್ಜನ್ಯ ಹೆಚ್ಚಾಗಿತ್ತು. ಆದರೂ ದೊಡ್ಡ ಪಟ್ಟಣಗಳು, ವಿಶೇಷ ಜನವಸತಿ ಇದ್ದವು ; ಭಾರಿ ಕಾಲುವೆಗಳೂ ವಿಶೇಷ ವ್ಯಾಪಾರವೂ ಇದ್ದವು. ನಿರಂತರ ಯುದ್ಧ, ಅವ್ಯವಸ್ಥಿತ ರಾಜ್ಯಭಾರಗಳಿಂದ ೬೦೦ ವರ್ಷದೊಳಗಾಗಿ ಬರೀ ಬೆಂಗಾಡಾಯಿತು ರಾಜ್ಯ. ನಗರಗಳು ಜನಶೂನ್ಯವಾದವು ; ಕಟ್ಟಡ ಹಾಳುಬಿದ್ದವು.

ಹಿಂದುಸ್ಥಾನದಿಂದ ಯೂರೋಪಿಗೆ ವಿಮಾನಮಾರ್ಗದಲ್ಲಿ ಹೋದರೆ ಪಾಲ್ಮೈರಾ, ಬಾಲ್‌ಬೆಕ್ ಅವಶೇಷಗಳ ಮೇಲೆ ಹೋಗುತ್ತೇವೆ. ಬೇಬಿಲಾನ್ ಎಲ್ಲಿತ್ತೋ, ಉಳಿದ ಇತಿಹಾಸ ಪ್ರಸಿದ್ಧ ಊರುಗಳೆಲ್ಲಿದ್ದವೋ— ಈಗ ಮಾಯವಾಗಿವೆ— ನೋಡಬಹುದು.

೩೬

## ದಕ್ಷಿಣ ಭಾರತ ವಲಸೆ ಹೋಯಿತು

ಏಪ್ರಿಲ್ ೨೮, ೧೯೩೨

ಬಹಳ ದೂರ ತಿರುಗಾಡಿದೇವೆ ನಾವು. ಮತ್ತೆ ಭಾರತಕ್ಕೆ ಹಿಂದಿರುಗಿ ಬಂದು ನಮ್ಮ ಹಿರಿಯರು ಏನು ಮಾಡುತ್ತಿದ್ದರೋ ನೋಡೋಣ. ಗಡಿನಾಡಿನ ಸಾಮ್ರಾಜ್ಯ—ಕುಶಾನರದು—ನೆನಪಿಲ್ಲವೆ ? ಇಡೀ ಉತ್ತರ ಹಿಂದುಸ್ಥಾನ, ಮಧ್ಯ ಏಷ್ಯದ ಬಹುಭಾಗಗಳನ್ನೊಳಗೊಂಡು ಪುಷ್ಪಪುರ (ಪೆಷಾವರ್) ದಲ್ಲಿ ರಾಜಧಾನಿ ಮಾಡಿಕೊಂಡಿದ್ದ ಬೌದ್ಧ ರಾಜ್ಯ. ಇದೇ ಕಾಲಕ್ಕೆ ದಕ್ಷಿಣ ಭಾರತದಲ್ಲಿ ಆ ಕೊನೆಯಿಂದ ಈ ಕೊನೆಗೆ ಹಬ್ಬಿದ್ದ ರಾಜ್ಯವೊಂದಿತ್ತು .. ಆಂಧ್ರಸಾಮ್ರಾಜ್ಯ. ನೆನಪಿದೆಯೆ ? ೩೦೦ ವರ್ಷದವರೆಗೆ ಕುಶಾನರೂ ಆಂಧ್ರರೂ ವೈಭವದಿಂದ ಬಾಳಿದರು. ಕ್ರಿ. ಶ. ಮೂರನೆ ಶತಮಾನದ ಮಧ್ಯೆ ಈ ಸಾಮ್ರಾಜ್ಯಗಳೆರಡೂ ಮಾಯವಾಗಿ, ಕೆಲವುಕಾಲ ಹಿಂದುಸ್ಥಾನದಲ್ಲಿ ಹಲವಾರು ಚಿಕ್ಕಪುಟ್ಟ ಸಂಸ್ಥಾ-

ಗಳು ಇದ್ದವು. ಆದರೆ ಒಂದೇ ಶತಮಾನದೊಳಗೆ ಪಾಟಲೀ ಪುತ್ರದಲ್ಲಿ ಮತ್ತೊಬ್ಬ ಚಂದ್ರಗುಪ್ತ ಹುಟ್ಟಿದ; ಹಿಂದೂ ಸಾಮ್ರಾಜ್ಯವನ್ನು ಬಿರುಸಾಗೇ ಕಟ್ಟತೊಡಗಿದ. ಅದು ಗುಪ್ತವಂಶ ಅವರ ವಿಷಯ ತಿಳಿದುಕೊಳ್ಳುವ ಮೊದಲು, ಪೂರ್ವಖಂಡದ ದೂರ ದ್ವೀಪಗಳಿಗೆ ಭಾರತಕಲೆ, ಸಂಸ್ಕೃತಿಯ ಬೆಳಕನ್ನು ಒಯ್ದ ದಕ್ಷಿಣ ಭಾರತದ ಮಹಾಸಾಹಸದ ಅಂಕುರವನ್ನು ನೋಡೋಣ.

ಭಾರತದ ಆಕಾರ ಗೊತ್ತಷ್ಟೆ. ಎರಡು ಸಮುದ್ರ, ಇತ್ತ ಹಿಮಾಲಯ, ನಡುವೆ ಭಾರತ. ಉತ್ತರ ಭಾಗ ಸಮುದ್ರಕ್ಕೆ ಬಲು ದೂರವಾಗಿದೆ. ಮೊದಲೆಲ್ಲ ಹಗೆಗಳು, ದಾಳಿಗಾರರು ಆತ್ತಕಡೆ ಭೂಮಾರ್ಗವಾಗಿ ಭಾರತವನ್ನು ಹೊಗುತ್ತಿದ್ದರು. ಉತ್ತರಕ್ಕೆ ಅದೇ ಕೆಲಸ. ಆದರೆ ಪೂರ್ವಪಶ್ಚಿಮ ಭಾಗಗಳಿಗೆ ವಿಸ್ತಾರವಾದ ಸಮುದ್ರ ತೀರ ಇವೆ. ಬರಬರುತ್ತ ಭಾರತದ ಅಗಲ ಕುಗ್ಗಿ, ಕೊನೆಗೆ ಕನ್ಯಾಕುಮಾರಿ ಬಳಿ ಪೂರ್ವಪಶ್ಚಿಮಗಳೆರಡೂ ಕೈಕೈ ಕಲೆಸುತ್ತವೆ. ಸಮುದ್ರತೀರದವರಿಗೆ ಸಹಜವಾಗಿಯೆ ಸಮುದ್ರದಲ್ಲಿ ಆಸಕ್ತಿ. ಅವರಲ್ಲಿ ಎಷ್ಟೋ ಜನ ಸಮುದ್ರ ಪ್ರವಾಸಿಗಳಾಗುತ್ತಾರೆನ್ನಬಹುದು. ಅತಿ ಪ್ರಾಚೀನಕಾಲದಿಂದಲೂ ದಕ್ಷಿಣಭಾರತ ಪಶ್ಚಿಮದೇಶಗಳೊಡನೆ ವ್ಯಾಪಾರ ನಡೆಸುತ್ತಿತ್ತು. ನಿನಗೆ ಹೇಳಿದೇನೆ. ಆದ್ದರಿಂದ ಪೂರ್ವದಿಂದಲೂ ಭಾರತದಲ್ಲಿ ನೌಕಾರಚನೆಯ ಕಲೆ ಇತ್ತೆಂದರೆ ಆಶ್ಚರ್ಯವೇನಿಲ್ಲ. ವ್ಯಾಪಾರಕ್ಕಾಗಿ, ಸಾಹಸಕ್ಕಾಗಿ ಜನ ಕಡಲು ದಾಟದರೆಂದರೆ ಬೆರಗಾಗಬೇಕಿಲ್ಲ. ಗೌತಮ ಬುದ್ಧ ಇಲ್ಲಿ ಬದುಕಿದ್ದಾಗ ಅಲ್ಲಿ ಸಿಂಹಳಕ್ಕೆ ಹೋಗಿ ವಿಜಯ ಅದನ್ನು ಗೆದ್ದನಂತೆ. ಕುದುರೆಗಳನ್ನೂ ಆನೆಗಳನ್ನೂ ನಾವೆಗಳಲ್ಲಿ ಹೇರಿಕೊಂಡು ಕಡಲಲ್ಲಿ ಸಿಂಹಳ ಪ್ರಯಾಣ ಮಾಡುತ್ತಿರುವ ವಿಜಯನ ಚಿತ್ರವೊಂದು ಅಜಂತಾದಲ್ಲಿದೆ ಆ ದ್ವೀಪಕ್ಕೆ 'ಸಿಂಹಳ' ಎಂದು ಹೆಸರಿಟ್ಟವನು ವಿಜಯ ಸಿಂಹಳ ದ್ವೀಪದಲ್ಲಿ ಸಿಂಹದ ಕತೆ ಒಂದು ಪ್ರಚಾರದಲ್ಲಿದೆ. ನನಗೆ ಮರೆತು ಹೋಯಿತು ಆ ಕತೆ ಸಿಂಹ ಶಬ್ದದಿಂದ ಸಿಂಹಳ ಬಂದಿರಬೇಕು.

ದಕ್ಷಿಣ ಭಾರತದಿಂದ ಸಿಂಹಳಕ್ಕೆ ದಾಟಿದ ಆ ಅಲ್ಪ ಪ್ರಯತ್ನವೇನು ಮಹಾಕಾರ್ಯವಲ್ಲ. ಬಂಗಾಳದಿಂದ ಗುಜರಾತಿನವರೆಗೆ ತೀರಭೂಮಿಯಲ್ಲಿ ಅನೇಕ ಭಾರತೀಯ ರೇವುಗಳಿದ್ದವು. ಅದೊಂದು ಸಾಲೇ ಇತ್ತು. ಬೇಕಾದಷ್ಟು ನೌಕಾ ನಿರ್ಮಾಣವಾಗುತ್ತಿತ್ತೆಂದು ಸಾಕ್ಷ್ಯವಿದೆ. ಆ ರೇವುಗಳಿಂದ ಎಷ್ಟೋ ಜನ ಕಡಲ ಪಯಣಮಾಡುತ್ತಿದ್ದರು. ನೈನಿ ಸೆರಮನೆಯಿಂದ ಚಾಣಕ್ಯನ ಅರ್ಥಶಾಸ್ತ್ರದ ವಿಷಯವನ್ನು ನಾ ಬರೆದಿರಲಿಲ್ಲವೆ? ಚಂದ್ರಗುಪ್ತ ಮೌರ್ಯನ ಆ ಮಹಾಮಂತ್ರಿ ನೌಕೆಯ ವಿಷಯವನ್ನು ಅದರಲ್ಲಿ ಹೇಳಿದಾನೆ. ಚಂದ್ರಗುಪ್ತನ ಆಸ್ಥಾನದ ಗ್ರೀಕ್ ರಾಯಭಾರಿ ಮೆಗಾಸ್ತನೀಸ್ ಕೂಡ ಹೇಳಿದಾನೆ. ಮೌರ್ಯರ

ಕಾಲಕ್ಕೇ ನೌಕಾನಿರ್ಮಾಣದ ಉದ್ಯೋಗ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ನೌಕೆಯೇಕೆ ಉಪಯೋಗಿಸಲಲ್ಲದಿದ್ದರೆ? ಅವುಗಳಲ್ಲಿ ಎಷ್ಟೋ ಜನ ಕಡಲು ದಾಟಿರಬೇಕು. ಇತ್ತ ಇದನ್ನು ನೆನೆದು, ಅತ್ತ ಕಡಲ ಪಯಣವೆಂದರೆ ಇಂದಿಗೂ ನಡುಗುವ, ಅದು ತಮ್ಮ ಧರ್ಮಕ್ಕೆ ವಿರೋಧವೆಂದು ತಿಳಿದ ಜನರನ್ನು ನೆನೆದರೆ ವಿಚಿತ್ರವೆನಿಸುತ್ತದಲ್ಲವೆ. ಇವರನ್ನು ಪುರಾತನ ಕಾಲದ ಚೂರುಚಾರು ಅನ್ನಲು ಸಾಧ್ಯವಿಲ್ಲ. ಪುರಾತನರು ಇವರಿಗಿಂತ ಸಾವಿರಪಾಲು ವಿವೇಕಿಗಳಾಗಿದ್ದರು. ಆದರೆ ಆ ವಿಚಿತ್ರ ಭಾವನೆಗಳೆಲ್ಲ ಈಗ ಮಾಯವಾಗಿವೆ. ಯಾರಿಗೂ ಆ ಭಾವನೆಯಲ್ಲಿ ಗೌರವವಿಲ್ಲ.

ಉತ್ತರಕ್ಕಿಂತ ಹೆಚ್ಚಾಗಿಯೆ ದಕ್ಷಿಣಭಾರತ ಕಡಲ ಕಡೆ ಗಮನವಿಟ್ಟಿತು. ಪರದೇಶದ ವಾಣಿಜ್ಯವೆಲ್ಲ ದಕ್ಷಿಣದ ಮೂಲಕವೆ. ತಮಿಳು ಪದ್ಯಗಳಲ್ಲಿ ಯವನ ದ್ರಾಕ್ಷಾರಸ, ಯವನಪಾತ್ರೆ, ಯವನ ದೀಪಗಳ ಪ್ರಸಕ್ತಿ ಹೇರಳವಾಗಿ ಬಂದಿದೆ. ಯವನ ಎಂದರೆ ಎಲ್ಲಾ ವಿದೇಶಗಳಿಗೆ, ಮುಖ್ಯವಾಗಿ ಗ್ರೀಕರಿಗೆ ಬಳಸುತ್ತಿದ್ದ ಮಾತು. ೨-೩ನೇ ಶತಮಾನದ ಆಂಧ್ರ ನಾಣ್ಯಗಳ ಮೇಲೆ ಎರಡು ಪಟದ ಹಡಗಿನ ಚಿತ್ರ ಇದೆ. ನೌಕಾನಿರ್ಮಾಣ, ಸಮುದ್ರ ವ್ಯಾಪಾರಗಳಲ್ಲಿ ಪುರಾತನ ಆಂಧ್ರರಿಗೆ ಎಷ್ಟು ರುಚಿಯಿತ್ತೋ ಅದರಿಂದ ತಿಳಿಯುತ್ತದೆ.

ಅಂತೆಯೇ ದಕ್ಷಿಣ ಸಾಹಸ ಕಾರ್ಯಕ್ಕೆ ಕೈಹಾಕಿತು. ಅದರ ಫಲವಾಗಿಯೆ ಪೂರ್ವಖಂಡದ ದ್ವೀಪಗಳಲ್ಲಿ ಭಾರತದ ವಸಾಹತು ಬೆಳೆದದ್ದು. ಕ್ರಿ. ಶ. ಮೊದಲನೆ ಶತಮಾನದಲ್ಲಿ ಈ ವಲಸೆಯ ದಿಗ್ವಿಜಯ ಯಾತ್ರೆ ಪ್ರಾರಂಭವಾಯಿತು. ಅಲ್ಲಿಂದ ಮುಂದೆ ನೂರಾರು ವರ್ಷಕಾಲ ಈ ಯಾತ್ರೆ ನಡೆಯುತ್ತಲೇ ಇದ್ದವು. ಮಲಯಾ, ಜಾವ, ಸುಮಾತ್ರ, ಕಾಂಬೋಡಿಯ, ಬೋರ್ನಿಯೋ ದ್ವೀಪಗಳಲ್ಲಿ ನೆಲೆಸಿ, ಅಲ್ಲಿ ಭಾರತಕಲೆ ಸಂಸ್ಕೃತಿಗಳನ್ನು ಸ್ಥಾಪಿಸಿದರು. ಬರ್ಮಾ, ಸಯಾಂ ಹಿಂದೀ ಚೀನಾಗಳಲ್ಲಿ ವಿಸ್ತಾರವಾದ ಭಾರತೀಯ ವಸಾಹತು ಇದ್ದವು. ತಮ್ಮ ಹೊಸ ವಸತಿಗಳಿಗೆ ಅವರು ಕೊಟ್ಟ ಹೆಸರು ಕೂಡ ಭಾರತದ್ದೇ. ಅಯೋಧ್ಯಾ, ಹಸ್ತಿನಾಪುರ, ತಕ್ಷಶಿಲೆ, ಗಾಂಧಾರ- ಇತಿಹಾಸ ಮಾಡಿದ್ದೇ ಮಾಡುತ್ತದೆ. ವಿಚಿತ್ರವಲ್ಲವೆ? ಅಮೆರಿಕಾಕ್ಕೆ ಹೋದ ಆಂಗ್ಲೋ-ಸಾಕ್ಸನರೂ ಹೀಗೇ ಮಾಡಿದರು. ಹಿಂದಿನ ಕಾಲದ ಇಂಗ್ಲಿಷು ಪಟ್ಟಣಗಳ ಹೆಸರೇ ಈಗಲೂ ಅಮೆರಿಕಾದಲ್ಲಿ ಕಾಣಬರುತ್ತದೆ.

ಹೋದ ಹೋದಲ್ಲೆಲ್ಲಾ ಈ ಭಾರತೀಯ ವಲಸೆಗಾರರು ತಪ್ಪಿನಡೆದಿರಬೇಕು ಸಂದೇಹವಿಲ್ಲ. ವಲಸೆಗಾರರ ರೀತಿಯೆ ಹಾಗೆ. ಆ ದ್ವೀಪಗಳ ಜನರನ್ನು ಹಿಂಡಿ ಅವರ ಮೇಲೆ ಅಧಿಕಾರ ನಡೆಸಿರಬೇಕು. ಕೆಲವು ಕಾಲದ ಮೇಲೆ ಅಲ್ಲಿನ ಪೂರ್ವ ನಿವಾಸಿಗಳೂ ಇವರೂ ಬೆರೆತು ಹೋಗಿರಬೇಕು. ಭಾರತದ ಸಂಬಂಧ ಸುಲ

ಸಾಧ್ಯವಿರಲಿಲ್ಲವಲ್ಲ. ಈ ಪೂರ್ವ ದ್ವೀಪಗಳಲ್ಲಿ ಹಿಂದೂ ರಾಜ್ಯ ಸಾಮ್ರಾಜ್ಯಗಳು ಹುಟ್ಟಿದವು. ತರುವಾಯ ಬೌದ್ಧ ದೊರೆಗಳು ಬಂದರು. ಹಿಂದೂಗಳಿಗೂ ಬೌದ್ಧರಿಗೂ ಅಧಿನಾಯಕತನಕ್ಕಾಗಿ ಜಗಳವಾಯಿತು. ಇದನ್ನು ವಿಶಾಲ ಭಾರತ ಎನ್ನುತ್ತಾರೆ. ಈ ಇತಿಹಾಸ ಮನೋಹರವಾಗಿದೆ; ಸುದೀರ್ಘವಾಗಿದೆ. ಎಂಥ ಬೃಹತ್ ಶಿಲ್ಪ, ಎಂಥ ಮಹಾ ದೇವಾಲಯಗಳು ಈ ವಸಾಹತುಗಳಿಗೆ ಸೊಬಗಿನ ಕಳೆ ಕಟ್ಟಿದ್ದವೋ ಈಗಲೂ ಇರುವ ಹಾಳುಮೂಳು ಅವಶೇಷಗಳನ್ನು ನೋಡಿದರೆ ತಿಳಿಯುತ್ತದೆ. ಭಾರತೀಯ ಶಿಲ್ಪಿಗಳು, ಕುಶಲ ಕರ್ಮಿಗಳು ಕಟ್ಟಿದ ಮಹಾ ಪಟ್ಟಣಗಳು ಎಷ್ಟೋ ಇದ್ದವು. ಉದಾ: ಕಾಂಭೋಜ, ಶ್ರೀವಿಜಯ, ಅಪ್ರತ ವಿಭವದ ಅಂಕೋರ, ಮದಜಪಾಹಿತ

ಮೇಲುಗೈಗಾಗಿ ಜಗಳವಾಡುತ್ತ, ಕೈಕೈ ಬದಲಾಯಿಸುತ್ತ, ಒಂದನ್ನೊಂದು ನುಂಗುತ್ತ ಈ ಹಿಂದೂ ಬೌದ್ಧ ರಾಜ್ಯಗಳು ಈ ದ್ವೀಪಗಳಲ್ಲಿ ೧೪೦೦ ವರ್ಷಕಾಲ ಬದುಕಿದ್ದವು. ೧೫ನೆ ಶತಮಾನದಲ್ಲಿ ಕಟ್ಟಕಡೆಗೆ ಮುಸ್ಲಿಮರ ಕೈ ಮೇಲಾಯಿತು ಹಿಂದೆಯೇ ಪೋರ್ಚುಗೀಸರು, ಸ್ಪೆಯಿನಿನವರು, ಡಚ್ಚರು, ಇಂಗ್ಲಿಷರು, ಕೊನೆಗೆ ಅಮೆರಿಕನರು ಬಂದರು. ಚೀನೀ ಜನವಂತೂ ಒಂದೊಂದು ಸಲ ನಡುವೆ ಕೈ ಹಾಕುತ್ತ, ಒಂದೊಂದು ಸಲ ಗೆಲ್ಲುತ್ತ ಸದಾ ನೆಲೆಯಲ್ಲಿ ಇದ್ದರು. ಸಾಧಾರಣವಾಗಿ ಗೆಳೆಯರಂತೆ, ಒಲವುಗಾಣಿಕೆ ಕೊಟ್ಟು ತೆಗೆದುಕೊಳ್ಳುತ್ತಿದ್ದುದೇ ಹೆಚ್ಚು. ಅವರ ನಾಗರಿಕತೆ. ಉತ್ತಮ ಸಂಸ್ಕೃತಿ ಎಲ್ಲ ಕಾಲದಲ್ಲೂ ತಮ್ಮ ಪ್ರಭಾವವನ್ನೇನೋ ಬೀರುತ್ತಲೇ ಇದ್ದವು.

ಪೂರ್ವದಿಕ್ಕಿನ ಈ ಹಿಂದೂ ವಸಾಹತುಗಳಲ್ಲಿ ನಮಗೆ ಸ್ವಾರಸ್ಯವಾದ ಸಂಗತಿ ಎಷ್ಟೋ ಇವೆ. ಪ್ರಧಾನವಾದದ್ದು: ಆಗ ದಕ್ಷಿಣ ಭಾರತದಲ್ಲಿ ಪ್ರಮುಖವಾಗಿದ್ದ ಪ್ರಭುತ್ವ ಈ ವಲಸೆಯ ಯೋಜನೆಯನ್ನು ಏರ್ಪಡಿಸಿದ್ದು. ಮೊದಲು ಕೆಲವರು ಸಾಹಸಿಗಳು ತನಿತನಿಯಾಗಿ ಹೋಗಿರಬೇಕು; ಕ್ರಮೇಣ ವ್ಯಾಪಾರ ಬೆಳೆದಂತೆ ಕುಟುಂಬಗಳೂ ಗುಂಪುಗಳೂ ತಾವೇ ಹೋಗಿರಬೇಕು. ಮೊದಲು ವಲಸೆ ಹೋದವರು ಕಳಿಂಗದವರು (ಒರಿಸ್ಸಾ), ಪೂರ್ವ ತೀರದವರು ಎನ್ನುತ್ತಾರೆ. ಬಂಗಾಳದಿಂದಲೂ ಕೆಲವರು ಹೋಗಿರಬೇಕು. ಗುಜರಾತಿನಲ್ಲಿ ಕೆಲವರು. ತಾಯಿನಾಡಿನಿಂದ ಹೊರದೂಡಿಸಿಕೊಂಡವರು, ಈ ದ್ವೀಪಗಳಿಗೆ ಹೋದರೆಂದು ಹಿಂದಿನ ವಾಡಿಕೆ ಇದೆ. ಇದೆಲ್ಲ ಊಹಾಪೋಹ. ವಲಸೆಗಾರರ ಮುಖ್ಯ ಪ್ರವಾಹ ಹರಿದದ್ದು ಪಲ್ಲವ ದೇಶದಿಂದ. ಪಲ್ಲವರ ಪ್ರಬಲ ವಂಶವೊಂದು ಆಳುತ್ತಿದ್ದ ತಮಿಳುನಾಡಿನ ತೆಂಕಣ ಕೊನೆಯಿಂದ. ಈ ಪಲ್ಲವ ಪ್ರಭುತ್ವವೇ ಮಲೇಷಿಯದ ವಲಸೆಯನ್ನು ಏರ್ಪಡಿಸಿದುದು. ಉತ್ತರ ಭಾರತದಿಂದ ದಕ್ಷಿಣಕ್ಕೆ ನುಗ್ಗಿದುದರಿಂದ ಜನರ ನೂಕು ನುಗ್ಗಲು ನಾಡಿನಲ್ಲಿ ಹೆಚ್ಚಾಯಿತೋ ಏನೋ!

ಕಾರಣವೇನೇ ಇರಲಿ, ಭಾರತಕ್ಕೆ ದೂರವಾಗಿ ಬಿಡಿಬಿಡಿಯಾಗಿ ಹರಡಿದ್ದ ಸೀಮೆ ಗಳಲ್ಲಿ ಏಕಕಾಲದಲ್ಲಿ ವಸತಿಮಾಡಿಸಿ, ಅಲ್ಲಿ ವಸಾಹತುಗಳನ್ನ ಸ್ಥಾಪಿಸಿದರು. ಹಿಂದೀಚೀನಾ, ಮಲಯ ಪರ್ಯಾಯ ದ್ವೀಪ, ಬೋರ್ನಿಯೋ, ಸುಮಾತ್ರ, ಜಾವಾ ಮೊದಲಾದ ಸ್ಥಳಗಳಲ್ಲಿ ಈ ವಸತಿಗಳಿವೆ. ಇವೆಲ್ಲವೂ ಭಾರತೀಯ ಹೆಸರಿನ ಪಲ್ಲವ ವಸತಿಗಳು. ಹಿಂದೀ ಚೀನಾದಲ್ಲಿ ಕಾಂಭೋಜ (ಈಗಿನ ಕಾಂಬೋಡಿಯ) ಗಾಂಧಾರದ ಕಾಬೂಲು ಸೀಮೆಯಲ್ಲಿನ ಕಾಂಭೋಜದಿಂದ ಬಂದ ಹೆಸರು.

೪೦೦—೫೦೦ ವರ್ಷದವರೆಗೆ ಈ ವಸಾಹತುಗಳಲ್ಲಿ ಹಿಂದೂ ಧರ್ಮವೆ ಇತ್ತು. ಆಮೇಲೆ ಕ್ರಮಕ್ರಮವಾಗಿ ಬೌದ್ಧ ಧರ್ಮ ಹರಡಿತು. ಬಹು ಕಾಲದ ಮೇಲೆ ಇಸ್ಲಾಂ ಬಂತು ; ಮಲೇಷಿಯಾದ ಕೆಲವು ಭಾಗದಲ್ಲಿ ಮಾತ್ರ ಹರಡಿತು. ಕೆಲವು ಭಾಗದಲ್ಲಿ ಬೌದ್ಧ ಮತ ಸ್ಥಿರವಾಗಿ ನಿಂತಿತು.

ಮಲೇಷಿಯಾದಲ್ಲಿ ರಾಜ್ಯ ಸಾಮ್ರಾಜ್ಯ ಹುಟ್ಟಿದವು, ಹಾಳಾದವು. ಆದರೆ ದಕ್ಷಿಣ ಭಾರತದ ಈ ವಸಾಹತು ಸಾಹಸದ ನಿಜವಾದ ಫಲ ಈ ಭೂಭಾಗದಲ್ಲಿ ಹಿಂದೀ ಆರ್ಯ ಸಂಸ್ಕೃತಿಯ ಪ್ರಸಾರ. ಇವೊತ್ತಿಗೂ ಮಲೇಷಿಯಾದ ಜನ ನಾವು ಯಾವ ನಾಗರಿಕತೆಯ ಸಂತಾನವೋ ಕೆಲವು ಮಟ್ಟಿಗೆ ಅದೇ ನಾಗರಿಕತೆಯ ಸಂತಾನ. ಬೇರೆ ಪ್ರಭಾವವೂ ಅವರ ಮೇಲೆ ಬಿತ್ತು ; ಮುಖ್ಯವಾಗಿ ಚೀನೀ ಪ್ರಭಾವ. ಪ್ರಬಲವಾದ ಹಿಂದೀ ಚೀನೀ- ಈ ಎರಡು ಪ್ರಭಾವಗಳೂ ಮಲೇಷಿ ಯಾದ ಬೇರೆ ಬೇರೆ ನಾಡಿನಲ್ಲಿ ಹೇಗೆ ಮಿಶ್ರವಾಗಿವೆಯೋ ನೋಡಲು ಸ್ವಾರಸ್ಯ ವಾಗಿದೆ. ಕೆಲವು ಕಡೆ ಭಾರತೀಯತೆ ಹೆಚ್ಚು ; ಕೆಲವು ಕಡೆ ಚೀನೀ ಪ್ರಭಾವ ಹೆಚ್ಚು. ನಡುನಾಡಿನ ಬರ್ಮಾ, ಸಯಾಂ, ಹಿಂದೀ ಚೀನಾಗಳಲ್ಲಿ ಚೀನೀ ಪ್ರಭಾವ ಹೆಚ್ಚು. ಆದರೆ ಮಲಯಾದಲ್ಲಿ ಇಲ್ಲ. ಜಾವಾ, ಸುಮಾತ್ರ, ಮೊದ ಲಾದ ದ್ವೀಪಗಳಲ್ಲಿ ಭಾರತೀಯ ಪ್ರಭಾವ ಹೆಚ್ಚು ಕಾಣುತ್ತದೆ. ಈಚೆಗೆ ಕೆಲ ಮಟ್ಟಿಗೆ ಇಸ್ಲಾಂ ಬಂದಿದೆ.

ಆದರೆ ಚೀನೀ ಹಿಂದೀ ಪ್ರಭಾವಗಳಿಗೆ ಘರ್ಷಣೆ ಆಗಲಿಲ್ಲ. ಎರಡೂ ಪರಸ್ಪರ ಭಿನ್ನವಾದರೂ ಎಳ್ಳಷ್ಟೂ ತೊಂದರೆಯಿಲ್ಲದೆ ತಮ್ಮ ಪಾಡಿಗೆ ತಾವು ತಮ್ಮ ನೇಗಿಲ ಸಾಲನ್ನು ತುಳಿದವು. ಹಿಂದುವಾಗಲಿ, ಬೌದ್ಧವಾಗಲಿ, ಧರ್ಮಕ್ಕೆ ಭಾರತವೇ ಮೂಲಾಧಾರ. ಚೀನಾಕ್ಕೂ ಭಾರತವೇ ತಾನೇ ಧರ್ಮಮೂಲ. ಕಲೆಯಲ್ಲೂ ಮಲೇಷಿಯಾದಲ್ಲಿ ಭಾರತೀಯ ಪ್ರಭಾವವೇ ಪ್ರಧಾನ. ಚೀನೀ ಪ್ರಭಾವ ತುಂಬಿದ ಹಿಂದೀ ಚೀನಾದಲ್ಲೂ ಶಿಲ್ಪವೆಲ್ಲ ಸಂಪೂರ್ಣವಾಗಿ ಭಾರತೀಯ. ಆಡಳಿತ ಪದ್ಧತಿ, ಜೀವನ ಧರ್ಮಗಳಲ್ಲಿ ಚೀನೀ ಪ್ರಭಾವ ಹೆಚ್ಚಾಗಿ ಕಾಣುತ್ತಿತ್ತು. ಇದರಿಂದಲೇ ಇಂದಿಗೂ ಹಿಂದೀ - ಚೀನಾ, ಸಯಾಂ, ಬರ್ಮಾಗಳ ಜನ ಭಾರತಕ್ಕಿಂತ

ಚೀನಾಕ್ಕೇ ಹೆಚ್ಚು ಸಂಬಂಧಿಸಿದಂತೆ ಕಾಣುತ್ತಾರೆ. ವಂಶಪರಂಪರೆಯಿಂದ ಅವರಲ್ಲಿ ಮಂಗೋಲಿಯನ್ ರಕ್ತವೇನೋ ಇದೆ. ಆದರಿಂದ ಕೆಲವು ಮಟ್ಟಿಗೆ ಅವರಲ್ಲಿ ಚೀನೀ ಜನರ ಹೋಲಿಕೆ ಕಾಣುತ್ತದೆ.

ಭಾರತೀಯ ಶಿಲ್ಪಿಗಳು ಕಟ್ಟಿದ ದೊಡ್ಡ ಬೌದ್ಧ ದೇವಾಲಯದ ಪಾಳು ಗುಡಿ ಜಾವಾದ ಬೋರೊಬೊದೂರಿನಲ್ಲಿ ಈಗ ಇದೆ. ಆ ಕಟ್ಟಡದ ಗೋಡೆಯ ಮೇಲೆ ಬುದ್ಧನ ಜೀವನದ ಇಡೀ ಕತೆ ಕೊರೆದಿದಾರೆ. ಬುದ್ಧನಿಗೇ ಅಲ್ಲ, ಆ ಕಾಲದ ಭಾರತೀಯ ಕಲೆಗೂ ಕೂಡ ಅದ್ವಿತೀಯ ಸ್ಮಾರಕವಾಗಿವೆ ಅವು.

ಭಾರತೀಯ ಪ್ರಭಾವ ಇನ್ನೂ ಒಂದು ಹೆಜ್ಜೆ ಮುಂದೆ ಹೋಯಿತು. ಫಿಲಿಪೈನ್, ಫಾರ್ಮೋಸಾದ ವರೆಗೆ ಕೂಡ ಸಾಗಿಹೋಯಿತು. ಅವೆರಡೂ ಕೆಲವು ಕಾಲ ಸುಮಾತ್ರಾದ ಶ್ರೀವಿಜಯ ಪ್ರಭುತ್ವಕ್ಕೆ ಸೇರಿದ್ದವು. ಬಹು ಕಾಲದ ಮೇಲೆ ಫಿಲಿಪೈನ್ ಸ್ಪೆಯಿನಿಗೆ ಸೇರಿತು. ಈಗ ಅಮೇರಿಕಾಕ್ಕೆ ಅಧೀನ ವಾಗಿದೆ. ಫಿಲಿಪೈನ್‌ಗೆ ರಾಜಧಾನಿ ಮನಿಲಾ. ಕೆಲವು ದಿನದ ಹಿಂದೆ ಅಲ್ಲೊಂದು ಶಾಸನ ಸಭಾ ಭವನವನ್ನು ಕಟ್ಟಿದರು. ಅದರ ಮುಂಭಾಗದಲ್ಲಿ ಫಿಲಿಪೈನ್ ಸಂಸ್ಕೃತಿಯ ಮೂಲ ಬೀಜದ ಪ್ರತೀಕಗಳೆಂದು ನಾಲ್ಕು ವಿಗ್ರಹ ಕೆತ್ತಿದಾರೆ. ಪ್ರಾಚೀನ ಭಾರತದ ಧರ್ಮಶಾಸ್ತ್ರಕರ್ತ ಮನು; ಚೀನೀ ತತ್ವಜ್ಞ ಲಾವೊತ್ಸೆ; ಆಂಗ್ಲೊ ಸಾಕ್ಸನ್ ನ್ಯಾಯದೇವತೆ; ಸ್ಪೆಯಿನ್.

೩೭

# ಗುಪ್ತರ ಕಾಲದ ಹಿಂದೂ ಸಾಮ್ರಾಜ್ಯ

ಏಪ್ರಿಲ್ ೨೯, ೧೯೩೨

ದಕ್ಷಿಣದ ಜನ ಅಗಾಧವಾದ ಕಡಲು ದಾಟಿ ದೂರ ದೇಶಗಳಲ್ಲಿ ವಸತಿ ವಸಾಹತುಗಳನ್ನು ಕಟ್ಟುತ್ತಿದ್ದರೆ, ಉತ್ತರದಲ್ಲಿ ವಿಚಿತ್ರ ಕ್ಷೋಭೆಯಾಗಿತ್ತು. ಕುಶಾನ ಸಾಮ್ರಾಜ್ಯ ಬಲಹೀನವಾಗಿ ಹಿರಿತನ ಉಡುಗಿ, ದಿನೇ ದಿನೇ ಕುಗ್ಗಿ ಹೋಗುತ್ತ ಚಿಕ್ಕದಾಗುತ್ತ ಬಂತು. ಉತ್ತರ ದಿಕ್ಕಿನಲ್ಲಿ ಚಿಕ್ಕ ಪುಟ್ಟ ರಾಜ್ಯ ಗಳು ಬೆಳೆದವು. ಎಷ್ಟೋ ಕಡೆ ವಾಯುವ್ಯ ಗಡಿಯಿಂದ ಭಾರತಕ್ಕೆ ನುಗ್ಗಿ ಬಂದ ಶಕರ, ಸಿಥಿಯನರ, ತುರ್ಕಿಗಳ ವಂಶದವರು ಆಳುತ್ತಿದ್ದರು. ಇವರೆಲ್ಲ ಬೌದ್ಧ ರೆಂದೂ, ಭಾರತಕ್ಕೆ ದಾಳಿಯಿಡುವ ಹಗೆಗಳಂತಲ್ಲದೆ ಇಲ್ಲೇ ನೆಲೆಸಲು ಬಂದವ ರೆಂದೂ ಹಿಂದೆಯೇ ನಿನಗೆ ಹೇಳಿದೇನೆ. ಮಧ್ಯ ಏಷಿಯಾದಿಂದ ಬೇರೆ ಬಣ

ದವರು ಇವರನ್ನು ಹೊರಗೆ ಅಟ್ಟಿದರು. ಅಟ್ಟಿದವರಿಗೂ ಚೀನೀ ಪ್ರಭುತ್ವ ಅದೇ ಗತಿ ಹಿಡಿಸಿತು. ಭಾರತಕ್ಕೆ ಬಂದ ಮೇಲೆ ಈ ಜನ ಹಿಂದೀ ಆರ್ಯರ ಪದ್ಧತಿ ಸಂಪ್ರದಾಯಗಳನ್ನು ಅನುಸರಿಸಿದರು. ಸಂಸ್ಕೃತಿ, ನಾಗರಿಕತೆ, ಧರ್ಮಗಳಿಗೆ ಭಾರತವೆ ತವರುಮನೆಯೆಂದು ಅವರ ಭಾವನೆ. ಕುಶಾನರೇ ಹಿಂದೀ ಆರ್ಯರ ಸಂಪ್ರದಾಯಗಳನ್ನು ಕೆಲವು ಮಟ್ಟಿಗೆ ಅವಲಂಬಿಸಿದ್ದರು. ಆದರಿಂದಲೇ ಅಷ್ಟು ಕಾಲ ಅವರು ಭಾರತದಲ್ಲಿ ನೆಲೆ ನಿಂತು, ವಿಸ್ತಾರವಾದ ಸೀಮೆಗಳನ್ನು ಆಳಿದುದು. ಹಿಂದೀ ಆರ್ಯರಂತೆಯೆ ತಾವು ನಡೆದರು. ತಾವು ಪರಕೀಯರೆಂಬುದನ್ನು ಈ ದೇಶದವರು ಮರೆಯಲಿ ಎಂದು ಅವರ ಬಯಕೆ. ಸ್ವಲ್ಪ ಮಟ್ಟಿಗೆ ಅವರ ಬಯಕೆ ಸಫಲವೂ ಆಯಿತು. ಪೂರ್ಣ ಸಫಲವಾಗಲಿಲ್ಲ. ಪರಕೀಯರು ತಮ್ಮನ್ನು ಆಳುತ್ತಿದಾರಲ್ಲ ಎಂಬ ಕೊರಗು ಕ್ಷತ್ರಿಯರಲ್ಲಿ ತುಂಬಿತ್ತು; ತುಂಬಾ ರೇಗಿದ್ದರು. ಈ ಅತೃಪ್ತಿ ಬೆಳೆದು ಜನರ ಮನಸ್ಸಿನಲ್ಲಿ ಅಶಾಂತಿ ಮೊಳೆಯಿತು. ಕಡೆಗೆ ಈ ಅತೃಪ್ತ ಜನಕ್ಕೆ ಒಬ್ಬ ಸಮರ್ಥ ನಾಯಕ ದೊರೆತ. ಅವನ ಬಾವುಟ ಹಿಡಿದು ಆರ್ಯಾವರ್ತವನ್ನು ರಕ್ಷಿಸಲು ಧರ್ಮಯುದ್ಧವನ್ನು ಮೊದಲುಮಾಡಿದರು.

ಆ ನಾಯಕನನ್ನು ಚಂದ್ರಗುಪ್ತನೆಂದು ಕರೆದರು. ಅಶೋಕನ ತಾತ ಚಂದ್ರಗುಪ್ತ ಬೇರೆ, ಇವನು ಬೇರೆ. ಇಬ್ಬರನ್ನೂ ಒಂದು ಮಾಡಿ ಬೆರಸಬೇಡ. ಇವನಿಗೂ ಮೌರ್ಯವಂಶಕ್ಕೂ ಕಿಂಚಿತ್ತೂ ಸಂಬಂಧವಿಲ್ಲ. ಇವನು ಪಾಟಲೀಪುತ್ರದಲ್ಲಿ ಒಬ್ಬ ಕಿರುದೊರೆ. ಆ ಕಾಲಕ್ಕಾಗಲೇ ಅಶೋಕನ ವಂಶಸ್ಥರು ಅಜ್ಞಾತ ಸಮುದ್ರದಲ್ಲಿ ಮುಳುಗಿಹೋಗಿದ್ದರು. ನಾವೀಗ ಕ್ರಿ. ಶ. ನಾಲ್ಕನೆ ಶತಮಾನದಲ್ಲಿ—ಸುಮಾರು ಕ್ರಿ. ಶ. ೩೨೮ ರಲ್ಲಿ—ಇದೇವೆಂಬುದು ನೆನಪಿರಲಿ. ಅಷ್ಟು ಹೊತ್ತಿಗೆ ಅಶೋಕ ಸತ್ತು ೫೩೪ ವರ್ಷವಾಗಿತ್ತು.

ಚಂದ್ರಗುಪ್ತ ಮಹತ್ವಾಕಾಂಕ್ಷಿ, ಸಮರ್ಥ. ಉತ್ತರದ ಆರ್ಯರಾಜರನ್ನೆಲ್ಲ ಗೆದ್ದು ಅವರೊಡಗೂಡಿ ಒಂದು ಬಗೆಯ ಸಂಯುಕ್ತರಾಜ್ಯ ಕಟ್ಟತೊಡಗಿದ. ಬಲಿಷ್ಠವಾದ ಸುಪ್ರಸಿದ್ಧ ಲಿಚ್ಛಾವಿ ಮನೆತನದ ಕುಮಾರದೇವಿಯ ಕೈ ಹಿಡಿದು ಆ ಗುಂಪಿನ ಬೆಂಬಲ ಪಡೆದ. ಜಾಣತನದಿಂದ ತನ್ನ ಬಲವನ್ನು ಕೂಡಿಸಿಕೊಂಡು ಆಮೇಲೆ ಪರದೇಶಿ ದೊರೆಗಳೆಲ್ಲರ ಮೇಲೂ 'ಧರ್ಮಯುದ್ಧ' ಹೂಡಿದ. ಪರಕೀಯರ ಕೈಯಲ್ಲಿ ತಮ್ಮ ಪದವಿ ಪ್ರಾಬಲ್ಯಗಳನ್ನು ಕಳೆದುಕೊಂಡಿದ್ದ ಕ್ಷತ್ರಿಯರೆಲ್ಲ ಈ ಯುದ್ಧಕ್ಕೆ ಆಸರೆಯಾದರು. ೧೦–೧೨ ವರ್ಷ ಯುದ್ಧ ಮಾಡಿದ ಮೇಲೆ ಉತ್ತರ ಭಾರತದ ಕೆಲವು ಸೀಮೆ ಚಂದ್ರಗುಪ್ತನ ಕೈಗೆ ಬಂತು. ಈಗಿನ ಮಹಾಕೋಸಲ ಪ್ರಾಂತವೂ ಅದರಲ್ಲಿ ಸೇರಿತ್ತು. ತರುವಾಯ ರಾಜಾಧಿರಾಜನೆಂದು ಚಂದ್ರಗುಪ್ತ ಪಟ್ಟಾಭಿಷಿಕ್ತನಾದ.

ಗುಪ್ತವಂಶ ಹೀಗೆ ಮೊದಲಾಯಿತು. ಹೂಣರು ಬಂದು ತೊಂದರೆ ಕೊಡುವ ತನಕ, ೨೦೦ ವರ್ಷದವರೆಗೆ, ಈ ವಂಶ ನಡೆಯಿತು. ಹಿಂದೂ ಧರ್ಮ, ರಾಷ್ಟ್ರೀಯತೆ ಪ್ರಬಲವಾಗಿದ್ದ ಕಾಲ ಅದು. ಪರದೇಶೀ ರಾಜರು—ತುರ್ಕ, ಪಠಾನ, ಉಳಿದ ಅನಾರ್ಯರು—ಸಮೂಲವಾಗಿ ಓಡಿಸಲ್ಪಟ್ಟರು ಜಾತಿ ಬುಡಕಟ್ಟುಗಳ ಜಗಳ ಇಲ್ಲಿ ಕಾಣಬರುತ್ತದೆ. ಹಿಂದೀ-ಆರ್ಯ ಪ್ರತಿಸ್ಪರ್ಧೆ. ತನ್ನ ಜಾತಿಯೆಂದರೆ ಬಲು ಹೆಮ್ಮೆ. ಈ ಅನಾಗರಿಕರನ್ನು ಮ್ಲೇಚ್ಛರನ್ನು ಕಂಡರೆ ತಿರಸ್ಕಾರ. ಸೋತವರು ಹಿಂದೀಆರ್ಯರ ದೊರೆ, ರಾಜ್ಯ ಆದರೆ ಗುಪ್ತರು ಕರುಣೆಯಿಂದ ನಡೆದುಕೊಂಡರು. ಅನಾರ್ಯರಾದರೆ ಕಿಂಚಿತ್ತೂ ದಯೆ ತೋರಲಿಲ್ಲ.

ಚಂದ್ರಗುಪ್ತನ ಮಗ ಸಮುದ್ರಗುಪ್ತ. ತಂದೆಗಿಂತಲೂ ಬಿರುಸಾದ ಯೋಧ. ಒಳ್ಳೆ ದಳಪತಿ. ಚಕ್ರವರ್ತಿಯಾದೊಡನೆ ದೇಶದಲ್ಲೆಲ್ಲ ದಿಗ್ವಿಜಯ ಮಾಡಿದ. ದಕ್ಷಿಣಕ್ಕೂ ನುಗ್ಗಿದ. ಗುಪ್ತ ಸಾಮ್ರಾಜ್ಯವನ್ನು ವಿಸ್ತರಿಸಿದ. ಭಾರತದ ಬಹು ಭಾಗವನ್ನು ಅವನ ಸಾಮ್ರಾಜ್ಯ ಆಕ್ರಮಿಸಿತು. ದಕ್ಷಿಣದಲ್ಲಿ ಆವನ ಚಕ್ರವರ್ತಿತ್ವ ಬರೀ ಹೆಸರಿಗೆ ಮಾತ್ರ ಇತ್ತು. ಉತ್ತರದಲ್ಲಿ ಕುಶಾನರನ್ನು ಸಿಂಧು ನದಿಯಾಚೆಗೆ ಅಟ್ಟಿದ.

ಸಮುದ್ರಗುಪ್ತನ ಮಗ ಇಮ್ಮಡಿ ಚಂದ್ರಗುಪ್ತನೂ ಒಬ್ಬ ಯೋಧನೆ. ಬಹು ಕಾಲದಿಂದ ಶಕ ಅಥವಾ ತುರ್ಕ ವಂಶದವರಿಗೆ ಅಧೀನವಾಗಿದ್ದ ಗುಜರಾತ, ಕಾಠೆವಾಡುಗಳನ್ನು ಅವನು ಗೆದ್ದ. ವಿಕ್ರಮಾದಿತ್ಯ ಎಂಬ ಹೆಸರಿಟ್ಟುಕೊಂಡ. ಸಾಧಾರಣವಾಗಿ ಈ ಹೆಸರೇ ರೂಢಿಯಾಗಿದೆ. ಸೀಜರನ ಹೆಸರಿನ ಹಾಗೆ ಈ ಹೆಸರೂ ಅನೇಕ ದೊರೆಗಳ ಬಿರುದು ಆಗಿ ಹೋಯಿತು. ಅದರಿಂದ ಕೊಂಚ ಗೊಂದಲವೂ ಆಗುತ್ತದೆ.

ದಿಲ್ಲಿಯಲ್ಲಿ ಕುತುಬ್ ಮಿನಾರ'ಬಳಿ ಗುಡ್ಡದಂಥ ಕಬ್ಬಿಣಗಂಬ ಒಂದಿದೆ; ನೋಡಿದ ನೆನಪಿದೆಯೆ ? 'ವಿಜಯ ಸ್ತಂಭ' ಎಂದು ವಿಕ್ರಮಾದಿತ್ಯ ಇದನ್ನು ಮಾಡಿಸಿ ನೆಡಿಸಿದನಂತೆ. ಅದರ ಶಿಲ್ಪಿಗೆಲಸ ಸೊಗಸಾಗಿದೆ. ನೆತ್ತಿಯ ಮೇಲೆ ಸಾಮ್ರಾಜ್ಯದ ಚಿಹ್ನೆಯಾದ ಪದ್ಮವನ್ನು ಕೆತ್ತಿದಾರೆ.

ಗುಪ್ತರ ಕಾಲ ಭಾರತದಲ್ಲಿ ಹಿಂದೂ ಸಾಮ್ರಾಜ್ಯದ ಕಾಲ. ಸಂಸ್ಕೃತ ಪಾಂಡಿತ್ಯ, ಆರ್ಯ ಸಂಸ್ಕೃತಿಗಳಿಗೆ ಮತ್ತೆ ಜೀವಕಳೆ ಬಂತು. ಗ್ರೀಕರು, ಕುಶಾನರು, ಇತರರು ಭಾರತದಲ್ಲಿ ಗ್ರೀಕ, ಮಂಗೋಲಿಯನ್ ಪ್ರಭಾವ ಬೀರಿದ್ದರು. ಅದನ್ನು ಪ್ರೋತ್ಸಾಹಿಸದೆ, ಹಿಂದೀ-ಆರ್ಯ ಸಂಪ್ರದಾಯಗಳನ್ನೇ ಎತ್ತಿ ಹಿಡಿದು ಭಾರತೀಯ ಜೀವನ-ಸಂಸ್ಕೃತಿಗಳಿಂದ ಆ ಪ್ರಭಾವವನ್ನು ಉದ್ದೇಶ ಪೂರ್ವಕವಾಗಿ ನಿರ್ಮೂಲ ಮಾಡಿದರು. ಸಂಸ್ಕೃತ ಪ್ರಭುತ್ವಭಾಷೆಯಾಯಿತು.

ಆದರೂ, ಆ ಕಾಲದಲ್ಲೂ ಸಂಸ್ಕೃತ ಸಾಮಾನ್ಯ ಜನರ ನುಡಿಯಾಗಿರಲಿಲ್ಲ. ಸಂಸ್ಕೃತಕ್ಕೆ ಬಹಳ ಸಮೀಪವಾದ ಒಂದು ಬಗೆ ಪ್ರಾಕೃತವನ್ನು ಜನರು ಆಡುತ್ತಿದ್ದರು. ಆಡುಮಾತಲ್ಲದಿದ್ದರೂ ಸಂಸ್ಕೃತ ಸಜೀವವಾಗಿಯೆ ಇತ್ತು. ಸಂಸ್ಕೃತ ಕಾವ್ಯ ನಾಟಕ, ಹಿಂದೀ-ಆರ್ಯ ಕಲೆ ವಿಜೃಂಭಿಸಿತ್ತು. ವೇದ ಪುರಾಣಗಳ ಮಹೋನ್ನತ ದಿನಗಳ ತರುವಾಯ ಸಂಸ್ಕೃತ ಸಾಹಿತ್ಯಚರಿತ್ರೆಯಲ್ಲಿ ಇದೇ ಸರ್ವೋತ್ತಮ ಸಮಯವೆನ್ನಬೇಕು. ಮಹಾಕವಿ ಕಾಳಿದಾಸ ಈ ಕಾಲದವನು. ವಿಕ್ರಮಾದಿತ್ಯನ ಆಸ್ಥಾನ ಕೋಟಿ ಮಿಂಚಿನ ಆಸ್ಥಾನ. ಆ ಕಾಲದ ಉತ್ತಮೋತ್ತಮ ಕವಿ, ಶಿಲ್ಪಿಗಳೆಲ್ಲ ಅಲ್ಲಿ ನೆರೆದಿದ್ದರು. ಆ ಆಸ್ಥಾನದ ನವರತ್ನಗಳ ವಿಷಯ ನೀ ಕೇಳಿಲ್ಲವೆ? ಆ ಒಂಭತ್ತು ರತ್ನಗಳಲ್ಲಿ ಕಾಳಿದಾಸ ಒಬ್ಬ.

ಪಾಟಲೀಪುತ್ರದಿಂದ ಅಯೋಧ್ಯೆಗೆ ತನ್ನ ರಾಜಧಾನಿಯನ್ನು ಸಮುದ್ರಗುಪ್ತ ಬದಲು ಮಾಡಿದ. ವಾಲ್ಮೀಕಿಯ ಕಾವ್ಯದಲ್ಲಿ ಆಚಂದ್ರಾರ್ಕ ಪರ್ಯಂತ ಸ್ಥಾಯಿಯಾದ ಶ್ರೀರಾಮಚಂದ್ರನ ಕತೆಗೆ ಸಂಬಂಧಿಸಿದ್ದು ಅಯೋಧ್ಯೆ. ತನ್ನ ಹಿಂದೀ-ಆರ್ಯ ದೃಷ್ಟಿಯ ತೀವ್ರತೆಗೆ ಅದೇ ಸರಿಯಾದ ಹಿನ್ನೆಲೆ ಎಂದು ಭಾವಿಸಿದನೇನೊ ಸಮುದ್ರಗುಪ್ತ!

ಗುಪ್ತರ ಆರ್ಯ-ಹಿಂದೂ ಪುನರುಜ್ಜೀವನ ಬೌದ್ಧಮತಕ್ಕೆ ಅನುಕೂಲವಾಗಿರಲಿಲ್ಲ. ಇದಕ್ಕೆ ಆಸರೆ ಕ್ಷತ್ರಿಯರು; ಅಂತೇ ಇದರಲ್ಲಿ ಕುಲೀನತೆಯ ಜಂಬವಿತ್ತು; ಬೌದ್ಧಮತದಲ್ಲಿ ಸಮತೆ ಹೆಚ್ಚು. ಅಲ್ಲದೆ ಮಹಾಯಾನ ಬೌದ್ಧ ಪಂಥಕ್ಕೂ ಕುಶಾನರಿಗೂ ಇತರ ಪರದೇಶಿ ದೊರೆಗಳಿಗೂ ಬಹಳ ಸಂಬಂಧವಿತ್ತು. ಆದರೆ ಎಲ್ಲಿಯೂ ಬೌದ್ಧರನ್ನೂ ಪೀಡಿಸಿದುವಿಲ್ಲ. ಬೌದ್ಧವಿಹಾರಗಳು ವಿದ್ಯಾಸತ್ರಗಳಾಗಿ ಉಳಿದೇ ಇದ್ದುವು. ಸಿಂಹಳದಲ್ಲಿ ಬೌದ್ಧಮತ ಪ್ರಬಲವಾಗಿತ್ತು; ಗುಪ್ತ ರಾಜರಿಗೂ ಸಿಂಹಳದ ದೊರೆಗಳಿಗೂ ಸ್ನೇಹವಿತ್ತು. ಸಿಂಹಳರಾಜ ಮೇಘವರ್ಣನು ಸಮುದ್ರಗುಪ್ತನಿಗೆ ಬೆಲೆಬಾಳುವ ಉಡುಗೊರೆ ಕಳಿಸಿದ; ಸಿಂಹಳದ ವಿದ್ಯಾರ್ಥಿಗಳಿಗಾಗಿ ಗಯಾಕ್ಷೇತ್ರದಲ್ಲಿ ಒಂದು ಆಶ್ರಮ ಕಟ್ಟಿಸಿದ.

ಆದರೆ ಹಿಂದುಸ್ಥಾನದಲ್ಲೇನೊ ಬೌದ್ಧಮತ ಕಳೆಗುಂದಿ ಹೋಯಿತು. ನಿನಗಾಗಲೆ ಹೇಳಿದೇನೆ: ಬ್ರಾಹ್ಮಣರ ಬಲದಿಂದಾಗಲಿ, ಆ ಕಾಲದ ಪ್ರಭುತ್ವ ಬಲದಿಂದಾಗಲಿ ಅದು ಕಳೆಗುಂದಲಿಲ್ಲ; ಹಿಂದೂ ಧರ್ಮ ಕ್ರಮೇಣ ಅದನ್ನು ಜೀರ್ಣಿಸಿಕೊಂಡಿತು.

ಈ ಕಾಲದಲ್ಲಿಯೆ ಸುಪ್ರಸಿದ್ಧ ಚೀನೀ ಯಾತ್ರಿಕನೊಬ್ಬ ಹಿಂದುಸ್ಥಾನಕ್ಕೆ ಬಂದ. ನಾನಾಗಲೆ ಹೇಳಿದ ಹುಯಾನ್‌ತ್ಸಾಂಗ್ ಅಲ್ಲ; ಇವನು ಫಾಹಿಯಾನ್. ಫಾಹಿಯಾನ್ ಬೌದ್ಧ. ಬೌದ್ಧಗ್ರಂಥ ಶೋಧನೆಗಾಗಿ ಬಂದ. ಇವನು ಹೇಳಿದಾನೆ: ಮಗಧ ದೇಶವಾಸಿಗಳು ಸುಖವಾಗಿದ್ದರು; ಸಿರಿವಂತರಾಗಿದ್ದರು;

ನ್ಯಾಯ ದಯಾಪೂರ್ಣವಾಗಿತ್ತು; ಮರಣದಂಡನೆ ಇರಲೇ ಇಲ್ಲ. ಗಯೆ ರ್ಜನವಾಗಿತ್ತು, ಹಾಳುಬಿದ್ದಿತ್ತು; ಕಪಿಲವಸ್ತು ಕಾಡಾಗಿತ್ತು; ಪಾಟಲೀಪುತ್ರದಲ್ಲಿ ಮಾತ್ರ 'ಜನ ಸಿರಿವಂತರೂ ಗುಣವಂತರೂ' ಆಗಿದ್ದರು. ಐಶ್ವರ್ಯಪೂರ್ಣವೂ ಮನೋಹರವೂ ಆದ ಎಷ್ಟೋ ಬೌದ್ಧ ವಿಹಾರಗಳಿದ್ದವು. ರಾಜಮಾರ್ಗದಲ್ಲಿ ಪ್ರವಾಸಿಗಳು ತಂಗಲು ಧರ್ಮಶಾಲೆಗಳಿದ್ದವು. ಅಲ್ಲಿ ಉಚಿತ ಭೋಜನ ಸೌಕರ್ಯವಿತ್ತು. ಮಹಾ ನಗರಗಳಲ್ಲಿ ಉಚಿತ ಚಿಕಿತ್ಸಾಲಯಗಳೂ ಇದ್ದವು.

ಭಾರತದಲ್ಲೆಲ್ಲಾ ತಿರುಗಾಡಿ ಫಾಹಿಯಾನ್ ಸಿಂಹಳಕ್ಕೆ ಹೋಗಿ ಅಲ್ಲಿ ೨ ವರುಷ ಇದ್ದ. ಅವನ ಜೊತೆಗಾರ ತಾಓಚಿಂಗ್‌ಗೆ ಭಾರತ ಒಗ್ಗಿಹೋಯಿತು. ಇಲ್ಲಿನ ಬೌದ್ಧ ಶ್ರಮಣರ ಪವಿತ್ರ ಜೀವನವನ್ನು ನೋಡಿ ಮೋಹಿತನಾಗಿ ಇಲ್ಲೇ ಇರಲು ನಿರ್ಧರಿಸಿದ. ಫಾಹಿಯಾನ್ ಮಾತ್ರ ಸಿಂಹಳದಿಂದ ಕಡಲು ದಾರಿಯಲ್ಲಿ ಚೀನಾಕ್ಕೆ ಹಿಂದಿರುಗಿದ. ಎಷ್ಟೋ ವರ್ಷವಾದ ಮೇಲೆ, ಎಷ್ಟೋ ಗಂಡಾಂತರ ದಾಟಿ ಮನೆಗೆ ಬಂದ.

ಇಮ್ಮಡಿ ಚಂದ್ರಗುಪ್ತ ಅಥವಾ ವಿಕ್ರಮಾದಿತ್ಯ ೨೩ ವರ್ಷ ಆಳಿದ. ತರುವಾಯ ಅವನ ಮಗ ಕುಮಾರಗುಪ್ತ ೪೦ ವರ್ಷ ಆಳಿದ. ಮುಂದೆ ಕ್ರಿ. ಶ. ೪೫೫ರಲ್ಲಿ ಸ್ಕಂದಗುಪ್ತ ಪಟ್ಟಕ್ಕೆ ಬಂದ. ಅವನ ಕಾಲದಲ್ಲಿ ಹೊಸ ವಿಪತ್ತೊಂದನ್ನು ಇದಿರಿಸಬೇಕಾಯಿತು ಕಡೆಗೆ ಅದು ಗುಪ್ತ ಸಾಮ್ರಾಜ್ಯವನ್ನೇ ಒಡೆದು ಹಾಕಿತು. ಅದರ ವಿಷಯ ಮುಂದಿನ ಕಾಗದದಲ್ಲಿ ಹೇಳುತ್ತೇನೆ.

ಅಜಂತಾದ ಕೆಲವು ಸೊಗಸಾದ (ಮಂಡೋದಕ) ಕುಡ್ಯ ಚಿತ್ರಗಳು, ಆ ಪಡಸಾಲೆಗಳು ಗುಪ್ತ ಶಿಲ್ಪದ ಮಾದರಿ. ಅವು ಎಷ್ಟು ಚೆಲುವಾಗಿವೆಯೋ ನೋಡಿದಾಗ ನಿನಗೇ ತಿಳಿಯುತ್ತದೆ. ನಮ್ಮ ದುರದೃಷ್ಟಕ್ಕೆ ಆ ಚಿತ್ರ ಮೆಲ್ಲನೆ ಮಾಯವಾಗುತ್ತಿವೆ; ಬಹು ಕಾಲ ಗಾಳಿ ಮಳೆಗೆ ನಿಲ್ಲಲಾರವು.

ಭಾರತದಲ್ಲಿ ಗುಪ್ತವಂಶ ಆಳುತ್ತಿದ್ದಾಗ ಜಗತ್ತಿನ ಇತರ ಭಾಗಗಳಲ್ಲಿ ಏನು ನಡೆಯಿತು? ಮೊದಲನೆ ಚಂದ್ರಗುಪ್ತನೂ ಕಾನ್‌ಸ್ಟಾಂಟಿನೋಪಲ್ ಕಟ್ಟಿದ ರೋಂ ಚಕ್ರವರ್ತಿ ಕಾನ್‌ಸ್ಟೆಂಟೈನ್‌ನೂ ಸಮಕಾಲೀನರು. ಕೊನೆಗೆ ಬಂದ ಗುಪ್ತ ರಾಜರ ಕಾಲದಲ್ಲಿ ರೋಂ ಸಾಮ್ರಾಜ್ಯ ಪೂರ್ವ-ಪಶ್ಚಿಮ ಎಂದು ಇಬ್ಭಾಗವಾಯ್ತು. ಕೊನೆಗೆ ಪಶ್ಚಿಮ ರೋಂ ಸಾಮ್ರಾಜ್ಯ ಉತ್ತರದ ಕಾಡುಜನರ ತುಳಿತಕ್ಕೆ ಬಲಿಯಾಯಿತು. ಅತ್ತ ರೋಂ ಸಾಮ್ರಾಜ್ಯ ದುರ್ಬಲವಾಗುತ್ತಿದ್ದ ಕಾಲಕ್ಕೆ ಸರಿಯಾಗಿ ಭಾರತದಲ್ಲಿ ಹೆಸರಾದ ದಳಪತಿಗಳು, ಮಹಾ ಸೇನೆಗಳು ಉಳ್ಳ ಬಲವಾದ ರಾಜ್ಯವಿತ್ತು. ಸಮುದ್ರಗುಪ್ತನನ್ನು 'ಭಾರತೀಯ

ನೆಪೋಲಿಯನ್" ಎಂದು ಕರೆಯುವುದುಂಟು. ಅವನಿಗೂ ಆಸೆಯೇನೂ ಇತ್ತು. ಆದರೆ ದಿಗ್ವಿಜಯಕ್ಕಾಗಿ ಭಾರತವನ್ನು ದಾಟುವ ಯೋಚನೆ ಮಾಡಲಿಲ್ಲ.

ಗುಪ್ತರ ಕಾಲ ಸಾಮ್ರಾಜ್ಯತೃಷ್ಣೆ, ದಿಗ್ವಿಜಯದ ಕಾಲ. ಇಂಥ ಕಾಲ ಎಲ್ಲ ದೇಶದ ಇತಿಹಾಸದಲ್ಲೂ ಇವೆ; ಒಂದಲ್ಲ ಎಷ್ಟೋ ಇವೆ. ದೀರ್ಘಕಾಲದ ಸಿಂಹಾವಲೋಕನದಲ್ಲಿ ಅವಕ್ಕೆ ಬೆಲೆಯೇ ಇಲ್ಲ. ಗುಪ್ತರ ಕಾಲಕ್ಕೆ ಬೆಲೆ ಬಂದದ್ದು, ಭಾರತದ ಜನರ ನೆನಪಿಗೆ ಯೋಗ್ಯವಾಗುವಂತಾದದ್ದು, ಆ ಕಾಲದಲ್ಲಾದ ಸಾಹಿತ್ಯ ಕಲೆಗಳ ಅದ್ಭುತ ಪುನರುಜ್ಜೀವನದಿಂದ.

೩೮

# ಹೂಣರು ಭಾರತಕ್ಕೆ ಬಂದರು

ಮೇ ೪, ೧೯೩೨

ವಾಯುವ್ಯದ ಪರ್ವತಪಂಗ್ತಿ ದಾಟಿ ಭಾರತದ ಮೇಲೆ ಬಂದೆರಗಿದ ಹೊಸ ಪಿಡುಗು ಹೂಣರು. ರೋಮಕ ಸಾಮ್ರಾಜ್ಯದ ಮಾತು ಹೇಳಿದಾಗ ಹೂಣರ ಪ್ರಸ್ತಾಪ ಮಾಡಿದ್ದೇನೆ. ಯೂರೋಪಿನಲ್ಲಿ ಅವರ ನಾಯಕ ಅಟ್ಟಿಲಾ; ರೋಂ, ಕಾನ್‌ಸ್ಟಾಂಟಿನೋಪಲ್ ಎರಡನ್ನೂ ಬಹು ಕಾಲ ನಡುಗಿಸುತ್ತಿದ್ದವನು. ಈ ಜಾತಿಗೆ ಸೇರಿದ ಶ್ವೇತ ಹೂಣರೇ ಭಾರತಕ್ಕೆ ಬಂದವರು. ಅವರು ಮಧ್ಯ ಏಷಿಯಾದ ದೇಶ ಸಂಚಾರಿಗಳು. ಬಹು ಕಾಲದಿಂದ ಭಾರತದ ಗಡಿಯಲ್ಲೇ ಸುತ್ತಾಡುತ್ತ ಅಲ್ಲಿದ್ದವರಿಗೆಲ್ಲ ತೊಂದರೆ ಕೊಡುತ್ತಿದ್ದರು. ಅವರ ಗುಂಪು ಬೆಳೆದಂತೆ, ಹಿಂದಿನಿಂದ ಇತರ ಜಾತಿಯ ಜನ ಬಂದು ಇವರನ್ನು ಮುನ್ನೂಕಿದಂತೆ ಭಾರತದ ಮೇಲೆ ದಾಳಿಯನ್ನೇ ಮೊದಲಿಟ್ಟರು.

ಗುಪ್ತವಂಶದ ಐದನೆ ದೊರೆ ಸ್ಕಂದಗುಪ್ತ ಈ ಹೂಣರ ದಾಳಿಯನ್ನು ಇದುರಿಸಬೇಕಾಯಿತು. ಅವನು ಅವರನ್ನು ಸೋಲಿಸಿ ಹಿಂದಕ್ಕೆ ಅಟ್ಟಿದ. ಅವರು ಹತ್ತು ಹನ್ನೆರಡು ವರುಷ ಬಿಟ್ಟು ಮತ್ತೆ ಬಂದರು. ಕ್ರಮೇಣ ಗಾಂಧಾರ ದೇಶದಲ್ಲೂ, ಉತ್ತರ ಭಾರತದ ನಾನಾ ಕಡೆಗಳಲ್ಲೂ ಹರಡಿಕೊಂಡರು. ಬೌದ್ಧರನ್ನು ಬಲು ಪೀಡಿಸಿದರು; ನಾನಾ ಬಗೆಯ ಹಿಂಸಾಕೃತ್ಯಗಳನ್ನು ಮಾಡಿದರು.

ಅವರ ಮೇಲೆ ಯುದ್ಧ ಸದಾ ನಡೆದಿರಬೇಕು; ಆದರೆ ಅವರನ್ನು ಹಿಂದಕ್ಕೆ ಅಟ್ಟುವುದು ಗುಪ್ತರಿಗೆ ಸಾಧ್ಯವಾಗಲಿಲ್ಲ. ತೆರೆ ತೆರೆಯಾಗಿ ಹೊಸ ಹೊಸದಾಗಿ ಹೂಣರು ಬಂದು ಮಧ್ಯ ಭಾರತವನ್ನೆಲ್ಲ ಆಕ್ರಮಿಸಿದರು. ಅವರ ನಾಯಕ

ತೋರೊಮಾನ ದೊರೆಯಾದ. ಅವನು ದುಷ್ಟ. ಆದರೆ ಅವನ ಮಗ ಮಿಹಿರಗುಲ ಅತಿ ನಿಷ್ಕರುಣಿ, ಹಸಿ ರಾಕ್ಷಸ. ಎತ್ತರವಾದ ಕೋಡುಗಲ್ಲಿಗೆ ಆನೆಯನ್ನು ಹತ್ತಿಸಿ, ಅಲ್ಲಿಂದ ಅದನ್ನು ಕೆಳಕ್ಕೆ ನೂಕಿ ತಮಾಷೆ ನೋಡುವುದು ಮಿಹಿರಗುಲನ ಮುಖ್ಯ ವಿನೋದವಂತೆ; ಕಾಶ್ಮೀರದ ಇತಿಹಾಸವಾದ 'ರಾಜ ತರಂಗಿಣಿ'ಯಲ್ಲಿ ಕಲ್ಹಣ ಬರೆದಿದ್ದಾನೆ. ಅವನ ರಾಕ್ಷಸ ಕೃತ್ಯಗಳಿಗೆ ರೋಸಿ ಕೊನೆಗೆ ಆರ್ಯಾವರ್ತ ತಿರುಗಿಬಿತ್ತು. ಗುಪ್ತವಂಶದ ಬಾಲಾದಿತ್ಯ, ಮಧ್ಯಭಾರತದ ಯಶೋಧರ ವರ್ಮರ ನಾಯಕತನದಲ್ಲಿ ಆರ್ಯರು ಹೂಣರನ್ನು ಸೋಲಿಸಿ ಮಿಹಿರಗುಲನನ್ನು ಸೆರೆಹಿಡಿದರು. ಬಾಲಾದಿತ್ಯ ಹೂಣರ ಹಾಗಲ್ಲ; ಉದಾರಿ. ಮಿಹಿರಗುಲನನ್ನು ಸೆರೆ ಬಿಡಿಸಿ ದೇಶಬಿಟ್ಟು ಹೋಗು ಎಂದ. ಮಿಹಿರಗುಲ ಕಾಶ್ಮೀರದಲ್ಲಿ ತಲೆ ಮರೆಸಿಕೊಂಡಿದ್ದು ಆ ಮೇಲೆ ಬಾಲಾದಿತ್ಯನ ಮೇಲೆ ಬಿದ್ದ; ಹಾಲೆರದ ಕೈಯನ್ನೆ ಕಡಿದ.

ಅಂತು ಬೇಗನೆ ಹೂಣರ ಪ್ರಾಬಲ್ಯ ಕಡಿಮೆಯಾಯಿತು. ಎಷ್ಟೋ ಜನ ಹೂಣರು, ಅವರ ಸಂತಾನ ಭಾರತದಲ್ಲೆ ನೆಲೆ ನಿಂತು ಆರ್ಯ ಜನರಲ್ಲಿ ಬೆರೆತು ಹೋದರು. ಮಧ್ಯ ಭಾರತದ, ರಾಜಸ್ಥಾನದ ರಾಜಪುತ್ರ ಜನ ಕೆಲವರಲ್ಲಿ ಅಶ್ವೇತ ಹೂಣ ರಕ್ತ ಇದ್ದರೂ ಇರಬಹುದು.

ಉತ್ತರ ಭಾರತದಲ್ಲಿ ಹೂಣರ ದರಬಾರು ಬಹು ಅಲ್ಪಕಾಲ—ಕೇವಲ ಐವತ್ತೇ ವರ್ಷ—ಇತ್ತು. ತರುವಾಯ ಶಾಂತವಾಗಿ ನೆಲೆಸಿದರು. ಹೂಣರ ಕದನಗಳೂ, ಅವರ ರಾಕ್ಷಸ ವೃತ್ತಿಯೂ ಭಾರತೀಯ ಆರ್ಯರ ಮನಸ್ಸಿನಲ್ಲಿ ಆಳವಾಗಿ ನಾಟಿದವು. ಹೂಣರ ಬಾಳುವೆಯ ರೀತಿ, ಆಡಳಿತದ ವಿಧಾನ ಆರ್ಯರ ಹಾಗಲ್ಲ; ಬೇರೆ. ಆರ್ಯರು ಇನ್ನೂ ವಿಶೇಷವಾಗಿ ಸ್ವಾತಂತ್ರ್ಯಪ್ರಿಯರಾಗಿದ್ದರು. ಅವರ ದೊರೆಗಳೂ ಕೂಡ ಜನಮನಕ್ಕೆ ತಲೆಬಾಗಬೇಕಾಗಿತ್ತು. ಅವರ ಗ್ರಾಮಸಭೆಗಳಿಗೆ ಬಹಳ ಪ್ರಾಬಲ್ಯವಿತ್ತು. ಹೂಣರು ಬಂದು ಇಲ್ಲಿ ನೆಲೆಸಿ ಭಾರತೀಯರೊಡನೆ ಬೆರೆತುದು ಆರ್ಯರ ಮಟ್ಟವನ್ನು ಬದಲಿಸಿ ಕೆಳಗಿಳಿಸಿತು.

ಗುಪ್ತವಂಶದ ಕೊನೆಯ ದೊರೆ ಬಾಲಾದಿತ್ಯ ಕ್ರಿ. ಶ. ೫೩೦ರಲ್ಲಿ ಸತ್ತ. ಶುದ್ಧ ಹಿಂದೂ ವಂಶದ ಈ ದೊರೆಗೆ ಬೌದ್ಧ ಧರ್ಮದಲ್ಲಿ ಅಭಿರುಚಿ; ಅವನ ಗುರು ಒಬ್ಬ ಬೌದ್ಧ ಸನ್ಯಾಸಿ—ಸ್ವಾರಸ್ಯವಾದ ಸಂಗತಿಯಿದು. ಗುಪ್ತರ ಕಾಲದಲ್ಲಿ ಕೃಷ್ಣಭಕ್ತಿ ಮತ್ತೆ ಬೆಳೆದುಬಂತು. ಆದರೂ ಬೌದ್ಧ ಮತದೊಂದಿಗೆ ಘರ್ಷಣೆ ನೇನಾಗಲಿಲ್ಲ.

ಗುಪ್ತರ ೨೦೦ ವರ್ಷ ಕಾಲದ ದೊರೆತನ ಮುಗಿದ ಮೇಲೆ ಉತ್ತರದಲ್ಲಿ ಸ್ವತಂತ್ರವಾದ ಚಿಕ್ಕಪುಟ್ಟ ರಾಜ್ಯಗಳೆಷ್ಟೋ ಹುಟ್ಟಿಕೊಂಡವು. ಕೇಂದ್ರ

ಸಾಮ್ರಾಜ್ಯವಿರಲಿಲ್ಲ. ಆದರೆ ದಕ್ಷಿಣದಲ್ಲಿ ದೊಡ್ಡ ರಾಜ್ಯವೊಂದು ಬೆಳೆಯಿತು. ರಾಮಚಂದ್ರನ ಸಂತತಿಯೆಂದು ಹೇಳಿಕೊಂಡ ಪುಲಕೇಶಿಯೆಂಬ ದೊರೆ ಚಾಳುಕ್ಯ ಸಾಮ್ರಾಜ್ಯವನ್ನು ಕಟ್ಟಿದ. ಈ ದಾಕ್ಷಿಣಾತ್ಯರಿಗೂ ಪೂರ್ವ ದ್ವೀಪಗಳ ಭಾರತೀಯ ವಸಾಹತುಗಳಿಗೂ ಬಹಳ ಹತ್ತಿರ ಸಂಬಂಧವಿದ್ದಿರಬೇಕು. ಆ ದ್ವೀಪಗಳಿಗೂ ಭಾರತಕ್ಕೂ ವ್ಯಾಪಾರ ನಡೆದಿರಬೇಕು. ಭಾರತೀಯ ನೌಕೆಗಳು ಆಗಾಗ ಪರ್ಷಿಯಾಕ್ಕೆ ವ್ಯಾಪಾರದ ದಿನಸನ್ನು ಸಾಗಿಸುತ್ತಿದ್ದವೆಂದೂ ತಿಳಿದಿದೆ. ಚಾಳುಕ್ಯ ಸಾಮ್ರಾಜ್ಯವು ಪರ್ಷಿಯಾದ ಸಾಸನಿದರೊಡನೆ—ಅವರ ರಾಜಶ್ರೇಷ್ಠ ಇವನ್ನಾಡಿ ಖುಸ್ರುವಿನೊಡನೆ ರಾಯಭಾರಿಗಳ ಅದಲುಬದಲು ಮಾಡಿತು.

೩೯

# ಭಾರತಾಧೀನ ಪರದೇಶೀ ವ್ಯಾಪಾರ

ಮೇ ೫, ೧೯೩೨

ನಾವೀಗ ಗಮನಿಸುತ್ತಿರುವ ಈ ಅತ್ಯಂತ ಪುರಾತನ ಇತಿಹಾಸದಲ್ಲಿ, ಸಾವಿರ ವರ್ಷಕ್ಕೆ ಮೇಲ್ಪಟ್ಟು ಪಶ್ಚಿಮ ಯೂರೋಪಿನಲ್ಲೂ ಪಶ್ಚಿಮ ಆಸಿಯಾದಲ್ಲೂ, ಮೂಡಲಲ್ಲಿ ಚೀನಾದ ವರೆಗೂ ಭಾರತೀಯ ವ್ಯಾಪಾರ ಅಭಿವೃದ್ಧಿ ಸ್ಥಿತಿಯಲ್ಲಿತ್ತು. ಏಕೆ ಗೊತ್ತೆ? ಆ ಕಾಲದ ಭಾರತೀಯರು ಒಳ್ಳೆ ನಾವಿಕರೂ ಒಳ್ಳೆ ವ್ಯಾಪಾರಿಗಳೂ ಆಗಿದ್ದರು ಎಂತಲೇ ಅಲ್ಲ. ಕೈಗಾರಿಕೆಗಳಲ್ಲಿ ಕುಶಲಮತಿಗಳಾಗಿದ್ದರು ಎಂತಲೇ ಅಲ್ಲ. ಅದೆಲ್ಲವೂ ನಿಜವೇ; ಅದರಿಂದಲೂ ಸಹಾಯವಾಯಿತು. ದೂರದೇಶಗಳ ವ್ಯಾಪಾರ ಭಾರತದ ಕೈಯಲ್ಲಿರಲು ಭಾರತದ ರಸಾಯನಶಾಸ್ತ್ರ ಪಾಂಡಿತ್ಯ, ಅದರಲ್ಲೂ ಬಣ್ಣ ಹಾಕುವ ಕಲೆ ವಿಶೇಷವಾಗಿ ಬೆಳೆದಿದ್ದುದೇ ಮುಖ್ಯ ಕಾರಣವಿರಬೇಕು. ಬಟ್ಟೆಗೆ ಗಟ್ಟಿ ಬಣ್ಣ ತಯಾರುಮಾಡುವ ವಿಧಾನಗಳನ್ನು ಆಗಿನವರು ಕಂಡು ಹಿಡಿದಿದ್ದರು. ನೀಲಿ ಗಿಡದಿಂದ ನೀಲಿ ಬಣ್ಣ ಮಾಡುವ ಪ್ರತ್ಯೇಕ ವಿಧಾನವೇ ಒಂದು ಅವರಿಗೆ ಗೊತ್ತಿತ್ತು. ನೀಲಿ ಬಣ್ಣಕ್ಕೆ ಇಂಗ್ಲಿಷಿನಲ್ಲಿ ಇಂಡಿಗೋ ಎನ್ನುತ್ತಾರೆ. ನೀಲಿಯ ತವರುಮನೆ ಹಿಂದುಸ್ಥಾನ ಎನ್ನಲು ಆ ಹೆಸರೇ ಸಾಕ್ಷಿಯಲ್ಲವೆ. ಪುರಾತನ ಭಾರತೀಯರಿಗೆ ಉಕ್ಕನ್ನು ಹದ ಮಾಡುವ ಕಲೆ, ಉಕ್ಕಿನ ಆಯುಧಗಳನ್ನು ಮಾಡುವ ವಿದ್ಯೆ ಗೊತ್ತಿತ್ತೋ ಏನೋ! ಸಿಕಂದರನ ದಂಡಯಾತ್ರೆಯ ಫಾರಸೀ ಕತೆಗಳಲ್ಲಿ ಒಳ್ಳೆ ಕತ್ತಿ ಕಠಾ

ರಿಯ ಪ್ರಸ್ತಾಪ ಬಂದರೆ, ಅದು ಹಿಂದುಸ್ಥಾನದ್ದು ಎಂದು ಬರುತ್ತದೆ ಎಂದು ನಿನಗೆ ನಾ ಹೇಳಿದ್ದುದು ನೆನಪಿದೆಯೆ ?

ಭಾರತದ ಈ ಬಣ್ಣ, ಉಳಿದ ಸಾಮಾನು ಇತರ ದೇಶಗಳಿಗಿಂತ ಚೆನ್ನಾಗಿರುತ್ತಿದ್ದವೆಂತಲೇ ವ್ಯಾಪಾರ ಭಾರತದ ಕೈಯಲ್ಲಿತ್ತು. ಸಹಜವೇ ತಾನೆ. ಉತ್ತಮ ಸಾಮಗ್ರಿ ಮಾಡುವ ವಸ್ತುನಿರ್ಮಾಣದಲ್ಲಿ, ಉತ್ತಮ ಅಥವಾ ಅಗ್ಗದ ವಿಧಾನ ಬಲ್ಲ ಮನುಷ್ಯನಾಗಲಿ ದೇಶವಾಗಲಿ ಅವರಷ್ಟು ಉತ್ತಮ ಸಾಮಗ್ರಿ, ಉತ್ತಮ ನಿರ್ಮಾಣವಿಧಾನ ಇಲ್ಲದ ಮನುಷ್ಯನನ್ನಾಗಲಿ ದೇಶವನ್ನಾಗಲಿ ಕ್ರಮೇಣ ವ್ಯಾಪಾರರಂಗದಿಂದ ಓಡಿಸಲೇಬೇಕು. ಈ ೨೦೦ ವರ್ಷದಲ್ಲಿ ಯುರೋಪು ಆಸಿಯಾಕ್ಕಿಂತ ಮುಂದೆ ಹೆಜ್ಜೆ ಹಾಕಲು ಇದೇ ಕಾರಣ. ಹೊಸ ಪರಿಶೋಧನೆ, ಹೊಸ ಕಲ್ಪನೆ, ರಚನೆಗಳಿಂದ ಯುರೋಪಿಗೆ ಪದಾರ್ಥ ನಿರ್ಮಾಣಕ್ಕೆ ಹೊಸ ವಿಧಾನ, ಬಲವಾದ ಹೊಸ ಸಾಧನ ಸಂಪತ್ತಿ ದೊರೆಯಿತು. ಇದರ ಬಲದಿಂದ ಜಗತ್ತಿನ ವ್ಯಾಪಾರವನ್ನು ಯುರೋಪು ತನ್ನ ಸ್ವಾಧೀನ ಮಾಡಿಕೊಂಡು ಪುಷ್ಟವಾಯಿತು. ಬೇರೆ ಕಾರಣಗಳಿಂದಲೂ ಅನುಕೂಲವಾಯಿತು. ಅದಿರಲಿ. ಈ ಸಾಧನ ಸಾಮಗ್ರಿ ಎಷ್ಟು ಮುಖ್ಯವಾದುದೋ ಒಂದು ಗಳಿಗೆ ಯೋಚಿಸು. ಮನುಷ್ಯ ಎಂದರೆ ಸಾಧನ ಸಾಮಗ್ರಿ ರಚಿಸುವ ಪ್ರಾಣಿ ಎಂದು ಒಬ್ಬ ಜ್ಞಾನಿ ಹೇಳಿದ್ದರು. ಆದಿಯಿಂದ ಇಂದಿನ ವರೆಗಿನ ಮಾನವ ಇತಿಹಾಸವನ್ನು ನೋಡಿದರೂ–ಮೊಟ್ಟ ಮೊದಲಿನ ಶಿಲಾಯುಗದ ಕಲ್ಲು ಚೂರಿ, ಕಲ್ಲು ಸುತ್ತಿಗೆಯಿಂದ ಉಗಿ ಯಂತ್ರ, ರೈಲು ಅಲ್ಲಿಂದ ಈಗಿನ ಈಗಿನ ರಾಕ್ಷಸ ಯಂತ್ರಗಳವರೆಗೂ––ಮೆಟ್ಟಿಲು ಮೆಟ್ಟಿಲಿಗೂ ಹೆಚ್ಚು ಹೆಚ್ಚು ಕುಶಲವಾದ ಆಯುಧಗಳ ಇತಿಹಾಸವೆ ಆಗಿದೆ. ಏನು ಮಾಡಲೂ ಉಪಕರಣ ಸಾಮಗ್ರಿ ಬೇಕಲ್ಲವೆ ನಮಗೆ ? ಯಾವ ಉಪಕರಣವೂ ಇಲ್ಲದಿದ್ದರೆ ನಮ್ಮ ಪಾಡು ಹೇಗಿರುತ್ತಿತ್ತೋ ?

ಉಪಕರಣ, ಆಯುಧ ಒಳ್ಳೆಯದು ; ನಮ್ಮ ಶ್ರಮ ಕಡಮೆ ಮಾಡುತ್ತದೆ. ಆದರೆ ಆಯುಧವನ್ನು ದುರುಪಯೋಗ ಪಡಿಸಲೂಬಹುದು. ಕರಗಸದಿಂದ ಬಹಳ ಉಪಯೋಗವಿದೆ. ಅದರಿಂದ ಮಗು ಗಾಯ ಮಾಡಿಕೊಳ್ಳಲೂ ಬಹುದು. ಚಾಕು ಅತ್ಯುಪಯುಕ್ತ ವಸ್ತು. ಪ್ರತಿಯೊಬ್ಬ ಬಾಲಭಟನಲ್ಲೂ ಇರಬೇಕಾದ್ದು. ಆದರೆ ಮೂರ್ಖನಾದವನು ಯಾರನ್ನಾದರೂ ಚಾಕುವಿಂದ ಕೊಲ್ಲಬಹುದಲ್ಲವೆ. ಪಾಪ, ಚಾಕು ಏನು ಮಾಡೀತು ? ಆ ಆಯುಧವನ್ನು ದುರುಪಯೋಗ ಮಾಡಿದವನದು ತಪ್ಪು.

ಹೊಸಕಾಲದ ಯಂತ್ರಗಳೂ ಹಾಗೆಯೆ. ಅವೇನೋ ಒಳ್ಳೆಯವೆ. ಅವನ್ನು ನಾನಾ ಬಗೆಯಲ್ಲಿ ದುರುಪಯೋಗ ಪಡಿಸಿದಾರೆ; ಪಡಿಸುತ್ತಾ ಇದಾರೆ. ಜನರಿಗೆ ಕೆಲಸದ ಭಾರ ಹಗುರವಾಗುವುದರ ಬದಲು ಇದು ಅವರ ಬಾಳನ್ನು ಮೊದಲಿಗಿಂತ ಕಷ್ಟತರವಾಗಿ ಮಾಡಿದೆ. ಜನಕೋಟಿಗೆ ಸುಖ ಸಂತೋಷ ಕೊಡಬೇಕಾಗಿತ್ತು, ಅದರ ಬದಲು ಅನೇಕರಿಗೆ ದುಃಖ ಕೊಟ್ಟಿದೆ; ಸರಕಾರಗಳ ಕೈಗೆ ಹಿಂದಿಗಿಂತ ಅಧಿಕಾರಕೊಟ್ಟು ಯುದ್ಧದ ಹೆಸರಿನಲ್ಲಿ ಕೋಟಿ ಪರಕೋಟಿ ಜನರನ್ನು ಕುರಿಗಳಂತೆ ಕತ್ತರಿಸುವಂತೆ ಮಾಡಿದೆ.

ಇದೆಲ್ಲಾ ಯಂತ್ರದ ತಪ್ಪಲ್ಲ, ಅದರ ದುರುಪಯೋಗದ್ದು. ಲಂಗುಲಗಾಮಿಲ್ಲದ, ಯಂತ್ರಗಳಿಂದ ಹಣ ಗಳಿಸಿಕೊಳ್ಳಬೇಕೆಂಬ ಜನ ಈ ಭಾರಿ ಯಂತ್ರಗಳ ಯಜಮಾನರಾಗಿರದೆ, ಜನರ ಪರವಾಗಿ, ಅವರಿಗೆ ಹಿತವಾಗಲೆಂಬ ಯಾಜಮಾನ್ಯವಿದ್ದರೆ ಬಹಳ ವ್ಯತ್ಯಾಸ —ಅಜಗಜಾಂತರ— ಕಂಡು ಬಂದೀತು.

ಆ ಕಾಲದಲ್ಲಿ ಭಾರತ ಈಗಿನಂತಿರಲಿಲ್ಲ. ಪದಾರ್ಥ ನಿರ್ಮಾಣದಲ್ಲಿ ಜಗತ್ತಿಗಿಂತ ಮುಂದೆ ಇತ್ತು. ಭಾರತದ ಬಟ್ಟೆ, ಬಣ್ಣ, ಬೇರೆ ಸಾಮಾನು ದೂರದೇಶಗಳಿಗೆ ಹೋಗುತ್ತಿತ್ತು. ಆ ಜನ ಇವನ್ನು ಬಯಸುತ್ತಿದ್ದರು; ಕಾತರರಾಗಿ ಹುಡುಕುತ್ತಿದ್ದರು. ಇದರಿಂದ ಭಾರತಕ್ಕೆ ಬೇಕಾದಷ್ಟು ಧನ ಬರುತ್ತಿತ್ತು. ಈ ವ್ಯಾಪಾರದ ಜೊತೆಗೆ ದಕ್ಷಿಣ ಭಾರತ ಮೆಣಸು, ಮಸಾಲೆ ದಿನಸನ್ನು ಹೊರನಾಡುಗಳಿಗೆ ಮಾರುತ್ತಿತ್ತು. ಪೂರ್ವ ದ್ವೀಪಗಳಿಂದಲೂ ಭಾರತದ ಮಾರ್ಗವಾಗಿ ಪಶ್ಚಿಮ ದೇಶಗಳಿಗೆ ಈ ಮಸಾಲೆ ಸಾಮಾನು ಹೋಗುತ್ತಿತ್ತು. ಯೂರೋಪಿನಲ್ಲಿ ಪಡುವಲ ಸೀಮೆಯಲ್ಲೂ ಮಸಾಲೆ ಪದಾರ್ಥಕ್ಕೆ ಬಹಳ ಗೌರವವಿತ್ತು. ಕ್ರಿ. ಶ. ೪೧೦ ರಲ್ಲಿ ರೋಮನ್ನು ವಶಪಡಿಸಿಕೊಂಡ ಗಾಥ್ ಜನರ ನಾಯಕ ಅಲರಿಕ್ ಅಲ್ಲಿಂದ ೩೦೦೦ ಪೌಂಡು ಮೆಣಸನ್ನು ಒಯ್ದನಂತೆ. ಆ ಮೆಣಸೆಲ್ಲಾ ಭಾರತದಿಂದಲೋ, ಆ ಮಾರ್ಗವಾಗಿಯೋ ಬಂದಿರಬೇಕು.

## ೪೦

# ದೇಶಗಳ, ನಾಗರಿಕತೆಗಳ ಪರಿಚಿತ

ಮೇ ೬, ೧೯೩೨

ಚೀನಾದ ವಿಷಯ ಎತ್ತದೆ ಬಹು ಕಾಲವಾಯಿತಲ್ಲವೆ? ನಮ್ಮ ಕತೆ ನೋಡೋಣ; ಪಶ್ಚಿಮದಲ್ಲಿ ರೋಂ ಬೀಳುತ್ತಿದ್ದಾಗ, ಗುಪ್ತರ ಆಳ್ವಿಕೆಯಲ್ಲಿ ಭಾರತ ಪುನಃ ಚೇತರಿಸಿಕೊಳ್ಳುತ್ತಿದ್ದಾಗ ಚೀನಾದಲ್ಲಿ ಏನು ನಡೆದಿತ್ತೋ? ರೋಮಿನ ಪತನದಿಂದ ಚೀನಾಕ್ಕೆ ಏನೂ ಆಗಲಿಲ್ಲ. ಒಂದಕ್ಕೊಂದು ಬಹಳ ದೂರ. ಆದರ ಚೀನಾ ರಾಜ್ಯ ಮಧ್ಯ ಆಸಿಯಾದ ಜನಾಂಗಗಳನ್ನು ಆಗಾಗ ಹಿಂದಕ್ಕಟ್ಟುತ್ತಿದ್ದುದು ಯೂರೋಪಿಗೂ ಭಾರತಕ್ಕೂ ಅತಿ ಸಂಕಟಕರವಾಗಿ ಪರಿಣಮಿಸುತ್ತಿತ್ತೆಂದು ಮೊದಲೇ ಹೇಳಿದೇನೆ. ಅವರು ಹಿಂದಕ್ಕಟ್ಟಿದ ಈ ಜನ ಪಡುಗಡೆಗೆ, ತೆಂಕಣಕ್ಕೆ ನುಗ್ಗಿದರು. ಹೋದ ಕಡೆ ಇದ್ದ ರಾಜ್ಯಗಳನ್ನು ಅಲ್ಲಾಡಿಸಿ ತಲೆಕೆಳಗು ಮಾಡಿದರು; ದೊಂಬಿಯಾಗುತ್ತಿತ್ತು. ಎಷ್ಟೋ ಜನ ಪೂರ್ವ ಯೂರೋಪಿನಲ್ಲೂ ಭಾರತದಲ್ಲೂ ನೆಲೆಸಿದರು.

ಚೀನಾಕ್ಕೂ ರೋಮಿಗೂ ಪ್ರತ್ಯಕ್ಷ ಸಂಬಂಧವೂ ಇತ್ತು; ಇಲ್ಲಿನ ರಾಯಭಾರಿ ಅಲ್ಲಿ; ಅಲ್ಲಿನವ ಇಲ್ಲಿ ಇದ್ದರು. ಚೀನೀ ಗ್ರಂಥಗಳಲ್ಲಿ ಹೇಳಿರುವ ಇಂಥ ರಾಯಭಾರಗಳಲ್ಲಿ ಕ್ರಿ. ಶ. ೧೬೬ರಲ್ಲಿ ರೋಂ ಚಕ್ರವರ್ತಿ ಅನ್‌ತೂನ್ ಕಳಿಸಿದ್ದು ಮೊದಲನೆಯದು. ನಿನಗಾಗಲೆ ಮಾರ್ಕಸ್ ಔರೀಲಿಯಸ್ ಅಂಟೋನಿಯಸ್ ವಿಷಯ ತಿಳಿಸಿದೇನೆ. ಅವನೇ ಈ ಅನ್‌ತೂನ್.

ಯೂರೋಪಿನಲ್ಲಿ ರೋಂ ಕೆಳಗೆ ಬಿದ್ದುದು ಬಹಳ ದೊಡ್ಡ ಸಂಗತಿ. ಒಂದು ನಗರ, ಒಂದು ಸಾಮ್ರಾಜ್ಯದ ವಿನಾಶವಷ್ಟೇ ಅಲ್ಲ ಅದು. ಹಾಗೆ ಅಲ್ಲಿಂದ ಮುಂದೆಯೂ ಬಹು ಕಾಲ ಕಾನ್‌ಸ್ಟಾಂಟಿನೋಪಲ್ಲಿನಲ್ಲಿ ರೋಂ ಸಾಮ್ರಾಜ್ಯ ಸಾಗಿಯೆ ಇತ್ತು; ಸಾಮ್ರಾಜ್ಯದ ಪ್ರೇತ ೧೫೦೦ ವರ್ಷದವರೆಗೂ ಯೂರೋಪಿನಲ್ಲಿ ಸುಳಿಯುತ್ತಲೇ ಇತ್ತು. ಆದರೆ ರೋಂ ಬಿದ್ದಾಗ ಮಹಾ ಯುಗವೇ ಒಂದು ಮುಗಿದಂತಾಯಿತು. ಗ್ರೀಕ್ ರೋಂಗಳ ಪುರಾತನ ಪ್ರಪಂಚ ಮುಳುಗಿ ಹೋದಂತಾಯಿತು. ರೋಮಿನ ಅವಶೇಷದ ಮೇಲೆ ಹೊಸದೊಂದು ಸಂಸ್ಕೃತಿ, ಹೊಸದೊಂದು ನಾಗರಿಕತೆ ಪಶ್ಚಿಮ ದೇಶದಲ್ಲಿ ಹುಟ್ಟಿ ಬಂತು. ಶಬ್ದ ಎಷ್ಟೋ ಸಲ ನಮಗೆ ಮೋಸ ಮಾಡುತ್ತವೆ. ಹಿಂದೆ ಕೇಳಿದ್ದ ಶಬ್ದ

ಮತ್ತೆ ಬಂದಾಗ ಅದೇ ಅರ್ಥವನ್ನೆ ನಾವು ಊಹಿಸುತ್ತೇವೆ. ರೋಂ ಬಿದ್ದ ಮೇಲೂ ಪಶ್ಚಿಮ ಯುರೋಪು ರೋಮನ ಭಾಷೆಯನ್ನೇ ಬಳಸುತ್ತಿತ್ತು ; ಆದರೆ ಒಬ್ಬೊಬ್ಬರದು ಒಂದೊಂದು ಅರ್ಥ, ಒಂದೊಂದು ಭಾವ. ಇವೊತ್ತಿನ ಯುರೋಪು ದೇಶಗಳು ಗ್ರೀಸ್ ರೋಂಗಳ ಸಂತತಿ ಎನ್ನುತ್ತಾರೆ. ಈ ಮಾತು ಕೊಂಚಮಟ್ಟಿಗೆ ನಿಜವಾದರೂ ಅವರ ಭಾವ ತಪ್ಪು. ಗ್ರೀಸ್ ರೋಂ ಗಳ ಆದರ್ಶವೇ ಬೇರೆ, ಈ ದೇಶಗಳ ಗುರಿಯೇ ಬೇರೆ. ಗ್ರೀಸ್ ರೋಂ ಗಳ ಆ ಪುರಾತನ ಪ್ರಪಂಚ ಪೂರ್ತಿಯಾಗಿ ಮುಳುಗಿ ಹೋಯಿತು. ಸಾವಿರಾರು ವರ್ಷದಿಂದ ಬೆಳಸಿದ್ದ ನಾಗರಿಕತೆ ಕ್ಷೀಣವಾಗಿ ಹೋಯಿತು. ಪಶ್ಚಿಮ ಯುರೋಪಿನಲ್ಲಿ ಆಗಲೆ ಅರೆ-ನಾಗರಿಕ, ಅರೆ-ಕಾಡು ಜನ ಇತಿಹಾಸದಲ್ಲಿ ತಲೆ ಕಾಣಿಸಿಕೊಂಡು ಕ್ರಮೇಣ ಹೊಸ ಸಂಸ್ಕೃತಿ, ಹೊಸ ನಾಗರಿಕತೆಯನ್ನು ಬೆಳಸಲು ಪ್ರಾರಂಭಿಸಿದ್ದರು. ರೋಮಿನಿಂದ ಎಷ್ಟೋ ಪಾಠ ಕಲಿತರು ; ಅನುಕರಣ ಮಾಡಿದರು. ಆ ಕಲಿತ ಕ್ರಮ ಮಾತ್ರ ಅತ್ಯಂತ ಕಷ್ಟವೂ ಶ್ರಮದಾಯಕವೂ ಆಗಿತ್ತು. ನೂರಾರು ವರ್ಷಗಳ ತನಕ ಯುರೋಪಿನಲ್ಲಿ ನಾಗರಿಕತೆ, ಸಂಸ್ಕೃತಿ ನಿದ್ದೆಹೋದಂತಿತ್ತು. ಅಜ್ಞಾನ ಮೌಢ್ಯಗಳ ಕತ್ತಲೆ ಕವಿದಿತ್ತು. ಅಂತೇ ಈ ಕಾಲವನ್ನು ಅಂಧಕಾರಯುಗ ಎನ್ನುವುದು.

ಹೀಗೇಕಾಯಿತು ? ಜಗತ್ತು ಹಿನ್ನಡೆಯಲೇಕೆ ? ನೂರಾರು ವರ್ಷ ಕಷ್ಟಪಟ್ಟು ಗಳಿಸಿದ ಜ್ಞಾನ ಮಾಯವಾಗಲೇಕೆ ? ಮರೆಯಲೇಕೆ ? ನಮ್ಮಲ್ಲಿ ಅತ್ಯಂತ ವಿವೇಕಿಗಳಾದವರನ್ನೂ ಕಾಡುವ ಮಹಾ ಪ್ರಶ್ನೆ ಇವು. ನಾನು ಅವಕ್ಕೆ ಉತ್ತರ ಹೇಳಲು ಯತ್ನಿಸುವುದಿಲ್ಲ. ಕೃತಿಯಲ್ಲೂ ವಿಚಾರದಲ್ಲೂ ಶ್ರೇಷ್ಠವೆನಿಸಿದ್ದ ಭಾರತ ಹೀಗೆ ಅವನತಿಯ ಪಾಲಾದುದು, ದೀರ್ಘಕಾಲ ದಾಸ್ಯದಲ್ಲಿ ಮುಳುಗಿದುದು ಆಶ್ಚರ್ಯವಲ್ಲವೆ ? ಚೀನಾ ನೋಡು. ಅಂಥ ಗತವೈಭವದ ಆ ದೇಶ ಕೊನೆಯಿಲ್ಲದ ಕದನ ಕೋಲಾಹಲಕ್ಕೆ ಗುರಿಯಾಗಬೇಕೆ ? ತುಣುಕು ತುಣುಕಾಗಿ, ಕೊಂಚ ಕೊಂಚವಾಗಿ ಮನುಷ್ಯಜಾತಿ ಕೂಡಿ ಹಾಕಿದ ಜ್ಞಾನ, ಯುಗಯುಗದ ವಿವೇಕ ಮಾಯವಾಗಲಿಕ್ಕಿಲ್ಲವೇನೋ. ಹೇಗೋ ಏನೋ ನಮ್ಮ ಕಣ್ಣು ಮುಚ್ಚಿ ಬಿಡುತ್ತವೆ ; ಕಣ್ಣು ಕಾಣಿಸದಾಗುತ್ತದೆ. ಕಿಟಿಕಿ ಮುಚ್ಚಿ ಕತ್ತಲಾಗುತ್ತದೆ. ಹೊರಗೆಲ್ಲ ಬೆಳಕೇ. ನಾವು ಕಿಟಿಕಿ ಹಾಕಿ, ಕಣ್ಣು ಮುಚ್ಚಿದರೆ ಬೆಳಕೇ ಮುಳುಗಿ ಹೋಯಿತೆ ?

ಯುರೋಪಿನ ಅಂಧಕಾರ ಯುಗಕ್ಕೆ ಕ್ರೈಸ್ತ ಧರ್ಮ-ಯೇಸುವಿನ ಧರ್ಮವಲ್ಲ, ರೋಂ ಚಕ್ರವರ್ತಿ ಕಾನ್‌ಸ್ಟೆಂಟೈನ್ ಕ್ರೈಸ್ತನಾದ ಮೇಲೆ ಪಶ್ಚಿಮದಲ್ಲಿ ಹರಡಿದ ಕ್ರೈಸ್ತ ಮತದ ಧರ್ಮ-ಕಾರಣವೆಂದು ಕೆಲವರ ಮತ. ೪ನೆ ಶತಮಾನದಲಿ ಕಾನ್‌ಸ್ಟೆಂಟೈನ್ ಕ್ರಿಸ್ತಾನವನ್ನು ಒಪ್ಪಿದುದು ಸಹಸ್ರ ವರ್ಷಕಾಲ 'ವಿಚಾ

ರಕ್ಕೆ ಸಂಕೋಲೆ ಹಾಕಿ, ಬುದ್ಧಿಗೆ ದಾಸ್ಯ ತೊಡಿಸಿ, ಜ್ಞಾನವನ್ನು ಕಟ್ಟಿ ಹಾಕಿ ದಂತಾಯಿತು' ಎನ್ನುತ್ತಾರೆ ಅವರು. ಆ ಕಾಲದಲ್ಲಿ ಬಂದದ್ದು ಬರೀ ಅಸಹನೆ, ಮೂಢ ಛಲ, ಹಿಂಸೆಯೇ ಅಲ್ಲ—ವಿಜ್ಞಾನಾದಿಗಳಲ್ಲಿ ಪ್ರಗತಿಯಿಲ್ಲದಾಯಿತು. ಅನೇಕ ಸಲ ಧರ್ಮಗ್ರಂಥಗಳು ಪ್ರಗತಿಕಂಟಕವಾಗುತ್ತವೆ. ಅವನ್ನು ಬರೆದ ಕಾಲದಲ್ಲಿ ಜಗತ್ತು ಹೇಗಿತ್ತೋ ಬರೆದಿರುತ್ತದೆ; ಆಗಿನ ವಿಚಾರ ಸಂಪ್ರದಾಯ ಗಳನ್ನು ತಿಳಿಸುತ್ತವೆ. ಆ ಸಂಪ್ರದಾಯವನ್ನಾಗಲಿ, ವಿಚಾರವನ್ನಾಗಲಿ ವಿರೋಧಿಸಲಾಗದು; ಅವು ಧರ್ಮಗ್ರಂಥದಲ್ಲಿವೆ! ಹೀಗೆ ಜಗತ್ತು ಎಷ್ಟೇ ಬದಲಾಗಲಿ, ಬದಲಾದ ಪರಿಸ್ಥಿತಿಗೆ ತಕ್ಕಂತೆ ನಮ್ಮ ವಿಚಾರ ಆಚಾರಗಳನ್ನು ಬದಲಿಸಲು ನಮಗೆ ಅವಕಾಶವಿಲ್ಲ. ಇದರ ಫಲ—ನಾವು ಎರಡೂ ತಪ್ಪಿದ ಅನರ್ಹರಾಗುತ್ತೇವೆ; ತೊಂದರೆಯುಂಟೂ ಇದ್ದೇ ಇದೆ.

ಯೂರೋಪಿನ ಅಂಧಕಾರ ಯುಗಕ್ಕೆ ಕಾರಣ ಎಂದು ಕೆಲವರು ಕ್ರಿಸ್ತಾನವನ್ನು ಬೈಯುತ್ತಾರೆ. ಬೇರೆ ಕೆಲವರು ಈ ಕಾಳರಾತ್ರಿಯಲ್ಲಿ ತಿಳಿವಿನ ಹಣತೆಯನ್ನು ಉರಿಸಿದುದು ಕ್ರಿಸ್ತಾನ ಮತ, ಕ್ರಿಸ್ತಾನ ಸನ್ಯಾಸಿಗಳು, ಪುರೋಹಿತರು ಎನ್ನುತ್ತಾರೆ. ಚಿತ್ರಕಲೆ, ಸಾಹಿತ್ಯವನ್ನು ಉಳಿಸಿದವರು ಅವರು. ಎಷ್ಟೋ ಅಮೂಲ್ಯ ಗ್ರಂಥಗಳನ್ನು ಜೋಕೆಯಿಂದ ಕಾಪಾಡಿ ಪ್ರತಿ ಮಾಡಿದಾರೆ.

ಹೀಗೆ ಕೆಲವು ಜನ ವಾದಿಸುತ್ತಾರೆ. ಇಬ್ಬರದೂ ಸರಿಯಿರಬಹುದು. ಆದರೆ ರೋಮಿನ ಪತನಾನಂತರ ಬಂದ ದೌರ್ಭಾಗ್ಯಕ್ಕೆಲ್ಲ ಕ್ರಿಸ್ತಾನವೇ ಕಾರಣವೆನ್ನುವುದು ಪರಿಹಾಸ ಯೋಗ್ಯ. ನಿಜವಾಗಿ ನೋಡಿದರೆ ಈ ದೌರ್ಭಾಗ್ಯವೇ ರೋಂ ಪತನಕ್ಕೆ ಕಾರಣ.

ನಾನು ಎಲ್ಲೆಲ್ಲೋ ಅಲೆದಾಡಿದೆ. ನಾ ನಿನಗೆ ಹೇಳಬೇಕೆಂದಿದ್ದುದು ಇಷ್ಟು: ಯೂರೋಪಿನಲ್ಲಿ ಅಕಸ್ಮಾತ್ತಾಗಿ ಸಾಮಾಜಿಕ ಸರ್ವನಾಶವಾಗಿ, ಆಕಸ್ಮಿಕ ಪರಿವರ್ತನವಾದಾಗ ಹಿಂದುಸ್ತಾನದಲ್ಲೂ ಚೀನಾದಲ್ಲೂ ಅಂಥದೇನೂ ಆಗಲಿಲ್ಲ. ಯೂರೋಪಿನಲ್ಲಿ ಒಂದು ನಾಗರಿಕತೆ ಹಾಳಾದುದೂ, ಈಗ ದೊಡ್ಡದಾಗಿ ಬೆಳೆದಿರುವ ಇನ್ನೊಂದು ಪ್ರಾರಂಭವಾದುದೂ ಕಂಡು ಬರುತ್ತದೆ. ಚೀನಾದಲ್ಲಿ ಒಂದೇ ಮಟ್ಟದ ಸಂಸ್ಕೃತಿ ನಡೆದು ಬಂದಿದೆ. ಎಲ್ಲೂ ಯಾವಾಗಲೂ ಎಳೆ ಹರಿದಿಲ್ಲ. ಏರಿಳಿತಗಳೇನೊ ಇವೆ. ಒಳ್ಳೇಕಾಲ, ಕೆಟ್ಟ ರಾಜರು, ಚಕ್ರವರ್ತಿಗಳು—ಬಂದು ಹೋದರು. ಮನೆತನಗಳೇ ಬದಲಾದವು. ಆದರೆ ಸಾಂಸ್ಕೃತಿಕ ಸೂತ್ರ ಮಾತ್ರ ಹರಿಯಲಿಲ್ಲ. ಅಖಂಡ ಚೀನಾ ಹಲವು ಸಣ್ಣಪುಟ್ಟ ರಾಜ್ಯಗಳಾಗಿ ಹರಿದು ಹಂಚಿ ಹೋದರೂ ಪರಸ್ಪರ ಯಾದವೀ ಕಲಹವೇ ಇದ್ದರೂ ಸಾಹಿತ್ಯ ಕಲೆ ವೃದ್ಧಿ ಹೊಂದಿದವು; ಅಂದವಾದ ಚಿತ್ರ ಬಂದವು; ಸೊಗಸಾದ ಪಾತ್ರೆ ಕಟ್ಟಡ ಆದವು. ಅಚ್ಚಿನ ಕಲೆ ಹುಟ್ಟಿತು. ಚಹಾ ಪಾನ

ಶಿಷ್ಟಾಚಾರವಾಯಿತು; ಕಾವ್ಯದಲ್ಲೂ ಕಾಲಿಟ್ಟಿತು. ಉತ್ತಮ ನಾಗರಿಕತೆಯಿಂದ ಮಾತ್ರವೇ ಲಭಿಸಬಹುದಾದ ಒಂದು ಸಜ್ಜನಿಕೆ, ಕಲಾವಂತಿಕೆ ಚೀನಾದಲ್ಲಿ ನಿರಾತಂಕವಾಗಿ ಹರಿದು ಬಂದಿದೆ.

ಭಾರತದಲ್ಲೂ ಅಷ್ಟೆ. ರೋಮಿನಲ್ಲಿದ್ದ ಹಾಗೆ ಆಕಸ್ಮಿಕ ವಿಚ್ಛೇದವಿಲ್ಲ. ಒಳ್ಳೆ ಕಾಲವೂ ಉಂಟು, ಕೆಟ್ಟ ಕಾಲವೂ ಉಂಟು. ನಯವಾದ ಕಲೆ ಸಾಹಿತ್ಯ ಕರ್ಮದ ಕಾಲವೂ ಉಂಟು; ಅವನತಿ ವಿನಾಶದ ಕಾಲವೂ ಉಂಟು. ಆದರೆ ನಾಗರಿಕತೆಯೇನೂ ಒಂದು ಬಗೆಯಾಗಿ ನಿರಾತಂಕವಾಗಿ ಸಾಗಿಬರುತ್ತದೆ. ಭಾರತದಿಂದ ಇತರ ಪೂರ್ವ ದೇಶಗಳಿಗೆ ಹರಡುತ್ತದೆ. ತನ್ನನ್ನು ಸುಲಿಗೆ ಮಾಡಲು ಬಂದ ಕಾಡು ಜನರಿಗೂ ಆಸರೆ ಕೊಟ್ಟು, ತನ್ನವರನ್ನಾಗಿಸಿ ಅವರಿಗೆ ತಿಳಿವು ಕೊಡುತ್ತದೆ.

ಪಶ್ಚಿಮ ದೇಶಗಳನ್ನು ತಗ್ಗಿಸಿ ಭಾರತ, ಚೀನಾಗಳನ್ನು ಹೊಗಳುತ್ತಿದೇನೆಂದು ತಿಳಿಯಬೇಡ. ಇವೊತ್ತಿನ ಹಿಂದುಸ್ತಾನದಲ್ಲಿ, ಚೀನಾದಲ್ಲಿ ಹೇಳಿಕೊಳ್ಳುವಂಥದೇನೂ ಇಲ್ಲ. ಗತವೈಭವ ಅಷ್ಟಿದ್ದರೂ ಇಂದು ಎಲ್ಲ ದೇಶಗಳ ಕಾಲಕೆಳಗೆ ಇವು ಎಂಬುದು ಕುರುಡನಿಗೂ ಕಾಣುವಂತಿದೆ. ಪೂರ್ವ ಸಂಸ್ಕೃತಿಯ ಪ್ರವಾಹಕ್ಕೆ ಭಂಗ ಬಾರದಿದ್ದ ಮಾತ್ರಕ್ಕೆ ಅಧೋಗತಿ ಬಂದಿಲ್ಲವೆಂದು ತಿಳಿಯಬೇಕಾಗಿಲ್ಲ. ಮೊದಲು ಗೋಪುರದಲ್ಲಿದ್ದವರು ಈಗ ತಳಕ್ಕೆ ಇಳಿದಿದ್ದೇವೆ ಎಂದರೆ ಜಗತ್ತಿನಲ್ಲಿ ನಮ್ಮ ಸ್ಥಾನ ತೀರ ಕೆಳಗೆ ಎಂದಲ್ಲವೆ? ನಮ್ಮ ಸಂಸ್ಕೃತಿಧಾರೆ ನಿಂತಿಲ್ಲವೆಂದು ನಮಗೆ ಹಿಗ್ಗಾದೀತು ಚಿಲುಮೆಯು ಬತ್ತುತ್ತಿರುವಾಗ ಇದೆಂಥ ಹಿಗ್ಗು? ನಮ್ಮ ಪೂರ್ವೇತಿಹಾಸದ ಎಳೆ ಆಕಸ್ಮಿಕವಾಗಿ ಹರಿದಿದ್ದರೇನಾದರೂ ನಮಗೆ ಒಳಿತಾಗುತ್ತಿತ್ತೋ ಏನೋ! ಅದರಿಂದ ನಮ್ಮನ್ನು ಸಮೂಲವಾಗಿ ಅಲ್ಲಾಡಿಸಿದಂತಾಗಿ ಹೊಸ ಜೀವ, ಹೊಸ ಚೇತನ ಬರುತ್ತಿತ್ತೋ ಏನೋ! ಈಗ ಜಗತ್ತಿನಲ್ಲಿ, ಭಾರತದಲ್ಲಿ ನಡೆಯುತ್ತಿರುವ ಸಂಗತಿಯೆಲ್ಲ ನಮ್ಮ ಈ ಪುರಾತನ ದೇಶಕ್ಕೆ ಹುರುಪು ಕೊಟ್ಟು ಹೊಸ ಜೀವ, ಹೊಸ ಹರೆಯ ಮೂಡಿಸುತ್ತದೆಯೋ ಏನೋ!

ಗತಕಾಲದಲ್ಲಿ ಭಾರತದ ಸ್ಥೈರ್ಯ, ಶಕ್ತಿಗಳಿಗೆ ಕಾರಣ—ವಿಶಾಲವಾಗಿ ಹರಡಿದ್ದ ಭಾರತದ ಗ್ರಾಮಸ್ವರಾಜ್ಯ (Republic) ಅಥವಾ ಸ್ವತಂತ್ರ ಗ್ರಾಮ ಪಂಚಾಯತಿಗಳು. ಈಗಿರುವಂತೆ ಭಾರಿ ಜಮೀನುದಾರರಾಗಲಿ ದೊಡ್ಡ ಭೂಸ್ವಾಮಿಗಳಾಗಲಿ ಇರಲಿಲ್ಲ. ಪಂಚಾಯತಿಗೆ, ಗ್ರಾಮಕ್ಕೆ ಅಥವಾ ಉಳುವ ರೈತರಿಗೆ ಭೂಮಿ ಸೇರಿತ್ತು. ಈ ಪಂಚಾಯತಿಗಳಿಗೆ ಬೇಕಾದಷ್ಟು ಬಲವೂ ಅಧಿಕಾರವೂ ಇತ್ತು. ಪಂಚಾಯತರನ್ನು ಹಳ್ಳಿಯ ಜನ ಆರಿಸುತ್ತಿದ್ದರು. ಅ
[illegible] ಬುತದ ತಳಪಾಯಕ್ಕೆ ಆದೇ ಗುರುತು. ಈ ದೊರೆ

ಬಂದ, ಹೋದ; ಇನ್ನೊಬ್ಬ ಬಂದ. ಅವನೂ ಹೋದ. ಅವರವರಲ್ಲಿ ಜಗಳವಾಯಿತು. ಯಾವ ರಾಯ ಬಂದರೂ ರಾಗಿ ಬೆಳೆವವರ ತಂಟೆಗೆ ಬರಲಿಲ್ಲ. ಗ್ರಾಮ ಪಂಚಾಯತಿಗಳ ಬಲ ಕುಗ್ಗಲಿಲ್ಲ; ಅವುಗಳ ಗೋಜಿಗೇ ಬರಲಿಲ್ಲ. ರಾಜ್ಯ ಸಾಮ್ರಾಜ್ಯಗಳು ತಲೆಕೆಳಗಾದರೂ ಗ್ರಾಮ ಪದ್ಧತಿಯ ಮೇಲೆ ಕಟ್ಟಿದ್ದ ಸಾಮಾಜಿಕ ಶಿಲ್ಪದಲ್ಲಿ ಅಂಥ ವ್ಯತ್ಯಾಸವೇನೂ ಆಗಲಿಲ್ಲ. ದಂಡಯಾತ್ರೆಗಳು, ದೊರೆಗಳ ಯುದ್ಧ, ಬೇರೆ ಬೇರೆ ದೊರೆಗಳ ಸಿಂಹಾಸನಾರೋಹಣ—ಇದೆಲ್ಲಾ ಕೇಳಿ ಇಡೀ ದೇಶ ಇದರಿಂದ ಕಲಕಿ ಹೋಗಿರಬೇಕು ಎಂದುಕೊಳ್ಳುತ್ತೇವೆ. ಕೆಲವು ಸಲ, ಅದರಲ್ಲೂ ಉತ್ತರ ದೇಶದಲ್ಲಿ ಇದರಿಂದ ಜನಜೀವನ ಕೊಂಚ ಕಲಕಿ ಹೋಯಿತಾಗಲಿ, ಒಟ್ಟಿನಲ್ಲಿ ಜನ ಇದಾವುದನ್ನೂ ಗಮನಿಸಲೇ ಇಲ್ಲ. ಮೇಲೆ ಏನೇ ವ್ಯತ್ಯಾಸವಾದರೂ ಜನರೇನೋ ತಮ್ಮ ಪಾಡಿಗೆ ತಾವು ಸಾಗಿದ್ದರು.

ಭಾರತದ ಸಮಾಜ ರಚನೆಗೆ ಬಲಕಾರಿಯಾಗಿ ಬಹುಕಾಲ ನಡೆಸಿಕೊಂಡು ಬಂದ ಮತ್ತೊಂದು ಅಂಶ—ಮೊದಲು ಇದ್ದ ವರ್ಣಧರ್ಮ. ವರ್ಣಧರ್ಮ ಕ್ರಮೇಣ ಕಠಿನವಾಯಿತು. ಆಗ ಹಾಗಿರಲಿಲ್ಲ; ಕೇವಲ ಜನ್ಮ ವಿಭಾಗವಾಗಿರಲಿಲ್ಲ. ಸಾವಿರಾರು ವರ್ಷ ಭಾರತದ ಜೀವನವನ್ನು ಸಂಘಟಿಸಿ ಹಿಡಿದಿತ್ತು; ಪರಿವರ್ತನೆ, ಪ್ರಗತಿಗೆ ಅಡ್ಡಿ ನಿಂತಲ್ಲ; ಅದಕ್ಕೆ ದಾರಿ ಮಾಡಿ ಧರ್ಮ, ಜೀವನಗಳಲ್ಲಿ ಪ್ರಾಚೀನ ಭಾರತೀಯ ದೃಷ್ಟಿ ಯಾವಾಗಲೂ ಸಹನೆಯದು, ಪ್ರಯೋಗಶೀಲತೆಯದು, ಪರಿವರ್ತನೆಯದು. ಅದಕ್ಕೆ ಬಲ ಕೊಟ್ಟದ್ದು ಇದೇ. ಕ್ರಮೇಣ ಒಂದರ ಹಿಂದೊಂದು ಆದ ದಾಳಿ, ಇತರ ವಿಪತ್ತು ಎಲ್ಲಾ ಸೇರಿ, ವರ್ಣ ವ್ಯವಸ್ಥೆಯನ್ನು ಗಡುಸಾಗಿ ಮಾಡಿದವು. ಅದರಂತೆ ಭಾರತೀಯ ಮನೋಧರ್ಮವೆ ಗಡುಸಾಗಿ, ಹಠ ಪ್ರಧಾನವಾಗಿ ರೂಪುಗೊಂಡಿತು. ಭಾರತೀಯರು ಈಗಿನ ಈ ದುರವಸ್ಥೆಗೆ ತಲಪುವತನಕ ಈ ಪಲ್ಲಟದ ಕ್ರಮ ನಡೆಯುತ್ತ ಬಂತು. ಕಡೆಗೆ ಎಲ್ಲ ಪ್ರಗತಿಗೂ ಕಂಟಕವಾಯಿತು ವರ್ಣ. ಸಮಾಜವನ್ನು ಏಕಸೂತ್ರದಲ್ಲಿ ಹಿಡಿವುದರ ಬದಲು ನೂರಾರು ಭಾಗ ವಿಭಾಗವಾಗಿ ಒಡೆದು, ನಮ್ಮ ಶಕ್ತಿ ಕುಗ್ಗಿಸಿ, ಅಣ್ಣ ತಮ್ಮಂದಿರು ಜಗಳವಾಡುವಂತೆ ಮಾಡುತ್ತಿದೆ.

ಹಿಂದಿನ ಕಾಲದಲ್ಲಿ ವರ್ಣ ವ್ಯವಸ್ಥೆ ಭಾರತದ ಸಮಾಜ ರಚನೆಗೆ ಪುಷ್ಟಿ ಕೊಟ್ಟದ್ದೇನೋ ನಿಜ. ಆದರೆ ಆಗಲೇ ಅದರಲ್ಲಿ ಅವಸಾನದ ಬೀಜವೂ ಇತ್ತು. ಅದರ ತಳಹದಿಯೇ ಅನ್ಯಾಯ; ಒಬ್ಬರಿಗೊಂದು ಒಬ್ಬರಿಗೊಂದು. ಅಂಥ ಏರ್ಪಾಡು ಕೊನೆಗೆ ವಿಫಲವಾಗಬೇಕಾದ್ದೇ. ಒಂದು ಗುಂಪನ್ನು ಒಂದು ಗುಂಪು ಹಿಂಡಿ ಒದುಕುವ ಅನ್ಯಾಯ, ಅಸಮತೆಗಳ ಮೇಲೆ ಸ್ಥಿರ. ಶಾಶ್ವತ ಸಮಾಜವನ್ನು ಕಟ್ಟಲಾದೀತೆ? ಅಂಥ ಅಯೋಗ್ಯ ದೌರ್ಜನ್ಯ ಇನ್ನೂ ಇದೆಯೆಂತಲೇ

ಜಗತ್ತಿನಲ್ಲಿ ಇಷ್ಟು ದುಃಖ, ಇಷ್ಟು ಸಂಕಟ. ಈಗ ಈ ಮಾತು ಎಲ್ಲರಿಗೂ ಗೊತ್ತಾಗಿದೆ. ಇದನ್ನು ನೀಗಬೇಕೆಂದು ಎಲ್ಲರೂ ದುಡಿಯುತ್ತಿದಾರೆ.

ಭಾರತದಲ್ಲಿದ್ದಂತೆ ಚೀನಾದಲ್ಲೂ ಸಮಾಜ ರಚನೆಯ ತಳಹದಿ ಹಳ್ಳಿಗಳು; ತಮ್ಮ ಹೊಲ ಉತ್ತು ಬಿತ್ತಿ ಬೇಸಾಯ ಮಾಡುವ ಲಕ್ಷಾಂತರ ರೈತರು. ಅಲ್ಲಿಯೂ ದೊಡ್ಡ ದೊಡ್ಡ ಜಮೀನುದಾರರು ಯಾರೂ ಇರಲಿಲ್ಲ. ಧರ್ಮ ಮೊಂಡ ಸಿದ್ಧಾಂತವಾಗಿರಲಿಲ್ಲ; ಅಸಹನೆಯಿಂದ ತುಂಬಿರಲಿಲ್ಲ. ಇವೊತ್ತಿಗೂ ಇಡೀ ಜಗತ್ತಿನಲ್ಲಿ ಧರ್ಮದ ವಿಷಯದಲ್ಲಿ ಮೊಂಡ ಸಾಂಪ್ರದಾಯಿಕರಲ್ಲದವರೆಂದರೆ ಚೀನೀ ಜನರೇ.

ಇನ್ನೂ ಒಂದು ಮಾತು ನೆನಪಿಡು. ಗ್ರೀಕಿನಲ್ಲಿ, ರೋಮಿನಲ್ಲಿ, ಇನ್ನೂ ಮೊದಲು ಮಿಶ್ರ ದೇಶದಲ್ಲಿದ್ದ ಹಾಗೆ ಭಾರತದಲ್ಲಾಗಲಿ ಚೀನಾದಲ್ಲಾಗಲಿ ಗುಲಾಮಗಿರಿ ಪದ್ಧತಿ ಇರಲಿಲ್ಲ. ಗುಲಾಮರಂತೆ ಕೆಲವರು ಆಳುಕಾಳು ಇರುತ್ತಿದ್ದರು. ಇಡೀ ಸಮಾಜದಲ್ಲಿ ಅದೊಂದು ಹನಿ. ಸಮಾಜಕ್ಕೆ ಏನೂ ಸಂಬಂಧವಿರಲಿಲ್ಲ. ಅವರಿರದಿದ್ದರೂ ಈ ಸಮಾಜ ಸರಾಗವಾಗಿ ನಡೆಯುತ್ತಿತ್ತು. ಗ್ರೀಸ್ ರೋಂಗಳಲ್ಲಿ ಹಾಗಲ್ಲ. ಗುಲಾಮರು ಸಮಾಜದ ಮುಖ್ಯ ಅಂಗ. ಕೆಲಸದ ಭಾರವೆಲ್ಲ ಅವರ ಮೇಲೇ. ಮಿಶ್ರ ದೇಶದಲ್ಲಿ ಈ ಗುಲಾಮರ ದುಡಿತವಿಲ್ಲದಿದ್ದರೆ ಪಿರಮಿಡ್ಡುಗಳೆಲ್ಲಿರುತ್ತಿದ್ದವು?

ಚೀನಾದಿಂದ ಈ ಕಾಗದ ಮೊದಲು ಮಾಡಿದೆ. ಚೀನಾದ ಕತೆ ಹೇಳಬೇಕೆಂದಿದ್ದೆ. ಆದರೆ ಎಲ್ಲೆಲ್ಲಿಗೋ ಹೊರಟು ಹೋದೆ. ಇದೇನು ನನಗೆ ಹೊಸದಲ್ಲ! ಮುಂದಿನ ಸಲ ಚೀನಾದ ವಿಷಯವನ್ನೇ ಪ್ರಸ್ತಾಪಿಸೋಣ.

೪೧

# ಟಂಗರ ಆಡಳಿತದಲ್ಲಿ ಚೀನದ ಅಭಿವೃದ್ಧಿ

ಮೇ ೭, ೧೯೩೨

ಚೀನದಲ್ಲಿ ಹಾನ್ ರಾಜವಂಶ, ಬುದ್ಧ ಧರ್ಮದ ಆಗಮನ, ಅಚ್ಚು ಮಾಡುವ ವಿಧಾನವನ್ನು ಕಂಡು ಹಿಡಿಯುವಿಕೆ, ಅಧಿಕಾರ ಸ್ಥಾನಗಳಿಗೆ ನೇಮಿಸುವಾಗ ಪರೀಕ್ಷೆಗಳನ್ನು ನಡೆಸುವ ಪದ್ಧತಿ ಇವುಗಳನ್ನೆಲ್ಲ ಕುರಿತು ಹೇಳಿದ್ದೇನೆ. ಕ್ರಿಸ್ತಶಕ ಮೂರನೆಯ ಶತಮಾನದಲ್ಲಿ ಹಾನ್ ರಾಜವಂಶ ಕೊನೆಗಂಡಿತು

ಸಾಮ್ರಾಜ್ಯವು ಮೂರು ವಿಭಾಗವಾಯಿತು. ಈ 'ರಾಷ್ಟ್ರತ್ರಯ'ವು ಶತಮಾನಗಳ ಕಾಲವಿತ್ತು. ಹೊಸ ಮನೆತನ ಬಂತು, ಪ್ರಬಲ ಟಂಗ್ ಮನೆತನವದು. ಮೂರು ರಾಷ್ಟ್ರಗಳೂ ಮತ್ತೆ ಒಂದಾದವು. ಏಳನೆಯ ಶತಮಾನದಲ್ಲಿ ಆಯಿತಿದು. ರಾಷ್ಟ್ರ ವಿಭಾಗವಾದ ಕಾಲದಲ್ಲೂ, ಉತ್ತರದಲ್ಲಿ ತಾರ್ತರರು ಮುತ್ತಿಗೆ ಹಾಕುತ್ತಿದ್ದರೂ, ಚೀನದ ಕಲೆ ಸಂಸ್ಕೃತಿ ವೃದ್ಧಿ ಹೊಂದುತ್ತಲೇ ಬಂತು. ಮಹಾ ಸರಸ್ವತೀ ಭಂಡಾರಗಳ ಮಾತೇ; ಅಂದವಾದ ಅಚ್ಚಿನ ಕಾರ್ಯಾಲಯಗಳ ಮಾತೇ! ಭಾರತವು ಚೀನಾಂಬರವನ್ನೂ ಇತರ ಪದಾರ್ಥಗಳನ್ನು ಮಾತ್ರವೇ ಅಲ್ಲ, ಚೀನಾದ ಮನೋಧರ್ಮ ಮತ ಕಲೆಗಳನ್ನೆಲ್ಲ ಆಮದು ಮಾಡಿತು. ಬಹುಶಃ ಭಾರತದಿಂದ ಬೌದ್ಧ ಸನ್ಯಾಸಿಗಳನೇಕರು ಚೀನಾಕ್ಕೆ ಹೋದರು ಅವರು ತಮ್ಮೊಂದಿಗೆ ಒಳ್ಳೆ ಕಲಾಸಂಪ್ರದಾಯಗಳನ್ನೂ ಕೊಂಡೊಯ್ದರು. ಭಾರತದ ಕಲಾಕೋವಿದರೂ ಕೈವಾಡದವರೂ ಸಹ ಚೀನಾಕ್ಕೆ ಹೋಗಿರಬೇಕು. ಭಾರತದಿಂದ ಬಂದ ಬೌದ್ಧಧರ್ಮ, ಹೊಸ ಕಲ್ಪನೆಗಳಿಂದ ಚೀನಾದ ಮೇಲೆ ಮಹಾ ಪರಿಣಾಮವುಂಟಾಯಿತು. ಚೀನಾ ಮಹಾ ನಾಗರಿಕಾವಸ್ಥೆಯಲ್ಲಿದ್ದ ರಾಷ್ಟ್ರ. ಚೀನಾ ಅನಾಗರಿಕ ರಾಜ್ಯವಾಗಿದ್ದು, ಬಹಳ ಹಿಂದೆ ಬಿದ್ದಿದ್ದು, ಭಾರತದ ಕಲೆ ಧರ್ಮಕಲ್ಪನೆಗಳು ಅಲ್ಲಿಗೆ ಹೋಗಿ ಚೀನಾವನ್ನಾಕ್ರಮಿಸಿದವೆಂದು ಭಾವಿಸಬಾರದು. ಇವು ಚೀನಾದ ಪ್ರಾಚೀನ ಕಲೆ, ಮನೋಧರ್ಮವನ್ನು ಪ್ರತಿಭಟಿಸಿ ನಿಲ್ಲಬೇಕಾಗಿತ್ತು. ಇವೆರಡರ ಘರ್ಷಣದಿಂದ ಇವೆರಡರಿಂದ ಭಿನ್ನವಾದ ಸಂಸ್ಕೃತಿಯೊಂದು ಉತ್ಪನ್ನವಾಯಿತು. ಅದರಲ್ಲಿ ಭಾರತದ ಪ್ರಕೃತಿ ವಿಶೇಷವಾಗಿದ್ದರೂ ಪ್ರಧಾನವಾಗಿ ಚೀಣೀಯೇ ಆಗಿತ್ತು; ಚೀನಾದ ಮುದ್ರೆ ಅದಕ್ಕೆ ಬಿದ್ದಿತ್ತು. ಭಾರತದಿಂದ ಬೀಸಿದ ಯೋಚನಾ ತರಂಗಗಳಿಂದ ಚೀನಾದ ಮಾನಸಿಕ ಜೀವನಕ್ಕೆ, ಕಲಾಭಿರುಚಿಗೊಂದು ಒತ್ತು ಬಿತ್ತು.

ಹೀಗೆಯೇ ಬುದ್ಧ ಸಂದೇಶವೂ ಭಾರತ ಕಲೆಯೂ ಇನ್ನೂ ಪೂರ್ವಕ್ಕೆ ಕೊರಿಯಾ, ಜಪಾನುಗಳಿಗೆ ಹೋಯಿತು ಇವುಗಳಿಂದ ಈ ದೇಶಗಳೆರಡೂ ಹೇಗೆ ಪರಿಣಾಮಗೊಂಡವೆಂಬುದು ಬಹಳ ಮನೋರಂಜಕವಾದ ಸಂಗತಿ. ಪ್ರತಿಯೊಂದು ದೇಶವೂ ತನ್ನ ಪ್ರತಿಭೆಗೆ ತಕ್ಕಂತೆ ಇವುಗಳನ್ನು ಉಪಯೋಗಿಸಿಕೊಂಡವು. ಬೌದ್ಧಧರ್ಮವು ಚೀನಾ ಜಪಾನ್‌ಗಳೆರಡರಲ್ಲೂ ಪ್ರವರ್ಧಮಾನಕ್ಕೆ ಬಂದರೂ ಒಂದೊಂದರಲ್ಲಿ ಒಂದೊಂದು ಬಗೆಯಾಗಿದೆ. ಭಾರತದ ಬುದ್ಧಧರ್ಮದೊಂದಿಗೆ ಹೋಲಿಸಿದರೆ ಎರಡೂ ಅದರಿಂದ ಭಿನ್ನವಾಗಿಯೇ ಇವೆ. ಜನಕ್ಕೆ, ವಾತಾವರಣಕ್ಕನುಗುಣವಾಗಿ ಕಲೆಯೂ ರೂಪಾಂತರ ಹೊಂದುತ್ತಾ ಬರುತ್ತದೆ. ಭಾರತದಲ್ಲಿ ನಾವೀಗ ಕಲೆಯನ್ನೂ ಸೌಂದರ್ಯೋಪಾಸನೆಯನ್ನೂ ಉಪೇಕ್ಷೆ ಮಾಡಿದೇವೆ. ಬಹಳ ಕಾಲದಿಂದ ನಾವು ಮಹಾ ರಾಶಿಗೆ ಸೇರುವ

ಸೌಂದರ್ಯ ನಿರ್ಮಾಣವೊಂದನ್ನು ನಿರ್ಮಿಸಿಲ್ಲ. ಅಷ್ಟೇ ಅಲ್ಲ, ನಮ್ಮಲ್ಲನೇಕರಿಗೆ ಸೌಂದರ್ಯಾಭಿರುಚಿಯೇ ಇಲ್ಲ; ಅದನ್ನೇ ಮರೆತು ಹೋಗಿದಾರೆ. ಸ್ವಾತಂತ್ರ್ಯವಿಲ್ಲದ ದೇಶದಲ್ಲಿ ಕಲೆಯೂ ಸೌಂದರ್ಯವೂ ಹೇಗೆ ಅಭಿವೃದ್ಧಿ ಹೊಂದೀತು? ದಾಸ್ಯದ, ಬಂಧನದ ಅಂಧಕಾರದಲ್ಲಿ ಅವು ನಾಶವಾಗಿ ಹೋಗುತ್ತವೆ. ಸ್ವಾತಂತ್ರ್ಯದ ದಿವ್ಯದೃಶ್ಯ ದರ್ಶನಕ್ಕಾರಂಭವಾದಂದಿನಿಂದ ನಮ್ಮ ಜನರ ಕಲಾಭಿಮಾನವೂ ಸೌಂದರ್ಯಾಭಿರುಚಿಯೂ ಎಚ್ಚರಗೊಳ್ಳುತ್ತಾ ಬಂದಿದೆ. ಈ ತಿಳಿವಳಿಕೆಯು ನಮ್ಮ ಮನೆಗಳ, ನಗರಗಳ, ಜೀವನದ ವಕ್ರತೆಯನ್ನೆಲ್ಲ ವಿರೂಪವನ್ನೆಲ್ಲ ತಿದ್ದುವುದೆಂದು ನಾನು ನಂಬಿದೇನೆ. ಈ ವಿಚಾರದಲ್ಲಿ ಚೀನಾವೂ ಜಪಾನೂ ಭಾರತಕ್ಕಿಂತ ಹೆಚ್ಚು ಅದೃಷ್ಟಶಾಲಿಗಳೆನ್ನಬೇಕು. ಅವರಿನ್ನೂ ವಿಶೇಷ ಕಲಾಪ್ರೇಮಿಗಳೂ, ಸೌಂದರ್ಯ ಪಕ್ಷಪಾತಿಗಳೂ ಆಗಿದಾರೆ.

ಚೀನಾದಲ್ಲಿ ಬೌದ್ಧಧರ್ಮ ಹರಡಿದಂತೆಲ್ಲ ಹೆಚ್ಚು ಹೆಚ್ಚಾಗಿ ಭರತಖಂಡದಿಂದ ಬೌದ್ಧ ಸನ್ಯಾಸಿಗಳೂ ಬೌದ್ಧರೂ ಚೀನಾಕ್ಕೆ ಬಂದರು. ಚೀನಾದ ಬುದ್ಧ ಸನ್ಯಾಸಿಗಳು ಭಾರತಕ್ಕೂ ಇತರ ದೇಶಗಳಿಗೂ ಹೋದರು. ಫಾಹಿಯನ್ನ ವಿಚಾರ ಹೇಳಿದೆ. ಹಿಯೆನ್‌ತ್ಸಾಂಗನ ವಿಚಾರ ನಿನಗೆ ಗೊತ್ತು. ಇಬ್ಬರೂ ಭಾರತಕ್ಕೆ ಬಂದರು. ಪೂರ್ವ ಸಮುದ್ರಗಳಲ್ಲಿ ಹುಯನ್‌ಷೆಂಗ್ ಎಂಬ ಚೀನಾದ ಬುದ್ಧ ಸನ್ಯಾಸಿ ಮಾಡಿದ ಮನೋರಂಜಕ ಸಂಚಾರ ವರದಿಯೊಂದಿದೆ. ಕ್ರಿಸ್ತಪೂರ್ವ ೪೯೯ ರಲ್ಲಿ ಆತ ಚೀನಾದ ರಾಜಧಾನಿಗೆ ಬಂದ. ಚೀನಾದಿಂದ ಪೂರ್ವಕ್ಕೆ ಸಾವಿರಾರು ಮೈಲಿಗಳಾಚೆ ಒಂದು ದೇಶವಿದೆಯೆಂದೂ, ಅದಕ್ಕೆ ಫುಸಂಗ್ ಎಂದು ಹೆಸರೆಂದೂ ಹೇಳಿದಾನೆ. ಚೀನಾ ಜಪಾನುಗಳಿಗೆ ಪೂರ್ವದಲ್ಲಿ ಫೆಸಿಫಿಕ್ ಸಾಗರವಿದೆ. ಬಹುಶಃ ಹುಯನ್‌ಷೆಂಗನು ಪೆಸಿಫಿಕ್ ಸಾಗರವನ್ನು ದಾಟಿರಬಹುದು. ಮೆಕ್ಸಿಕೋಗೆ ಹೋಗಿರಬಹುದು; ಏಕೆಂದರೆ ಆ ಕಾಲದಲ್ಲಿ ಮೆಕ್ಸಿಕೋದಲ್ಲೂ ಹಳೇ ನಾಗರಿಕತೆಯೊಂದಿತ್ತು.

ಚೀನಾದಲ್ಲಿ ಬುದ್ಧಧರ್ಮ ಹರಡಿದ್ದನ್ನು ಕಂಡು ಆಕರ್ಷಿತನಾಗಿ ಭಾರತದ ಬೌದ್ಧ ಧರ್ಮಾಚಾರ್ಯ ಬೋಧಿಧರ್ಮನು ದಕ್ಷಿಣ ಭಾರತದಿಂದ ಚೀನಾದೊಳಗಿನ ಕ್ಯಾಂಟನ್ನಿಗೆ ಹೋದ. ಬಹುತರ ಭಾರತದಲ್ಲಿ ಬೌದ್ಧಧರ್ಮವು ದುರ್ಬಲಗೊಳ್ಳುತ್ತಿದ್ದ ಕಾರಣ ಬೋಧಿಧರ್ಮನು ಚೀನಾಕ್ಕೆ ಹೋಗಿರಬೇಕು. ಕ್ರಿಸ್ತಶಕ ೫೨೬ ರಲ್ಲಿ ಬೋಧಿಧರ್ಮನು ಚೀನಾಕ್ಕೆ ಬಂದಾಗ ಬಹಳ ವೃದ್ಧನಾಗಿದ್ದನು. ಅವನೊಂದಿಗೂ, ಅವನ ಅನಂತರವೂ ಬೌದ್ಧ ಸನ್ಯಾಸಿಗಳನೇಕರು ಚೀನಾಕ್ಕೆ ಹೋದರು. ಲೋಯಂಗ್ ಎಂಬ ಒಂದು ಪ್ರಾಂತವಲ್ಲೇ ಈ ಕಾಲದಲ್ಲಿ ೩೦೦೦ಕ್ಕೆ ಹೆಚ್ಚು ಭಾರತ ಸನ್ಯಾಸಿಗಳೂ ೧೦೦೦೦ ಭಾರತೀಯ ಸಂಸಾರಗಳೂ [illegible]

ಭಾರತದಲ್ಲಿ ಬಹು ಬೇಗ ಬೌದ್ಧ ಧರ್ಮದ ಪುನರುಜ್ಜೀವನವಾಯಿತು. ಬುದ್ಧನ ಜನ್ಮಭೂಮಿಯೆಂದು, ಬೌದ್ಧ ಧರ್ಮಗ್ರಂಥಗಳೆಲ್ಲ ಇಲ್ಲಿದ್ದವೆಂದು ಭಾರತವು ಶ್ರದ್ಧಾಳುಗಳಾದ ಬೌದ್ಧರನ್ನು ಆಕರ್ಷಿಸತೊಡಗಿತು. ಆದರೇನು, ಭಾರತದಲ್ಲಿ ಬುದ್ಧಧರ್ಮದ ಕೀರ್ತಿ ಕರಗಿತು; ಚೀನಾವು ಬೌದ್ಧಧರ್ಮದ ಪ್ರಧಾನ ರಾಷ್ಟ್ರವೆನಿಸಿತು.

ಕ್ರಿಸ್ತಶಕ ೬೧೮ರಲ್ಲಿ ಕೌತ್ಸು ಎಂಬ ಚಕ್ರವರ್ತಿಯು ಟಂಗ್ ರಾಜವಂಶವನ್ನು ಸ್ಥಾಪಿಸಿದನು. ಆತನು ಚೀನಾವನ್ನೆಲ್ಲ ಒಟ್ಟುಗೂಡಿಸಿದ; ಅಸಾಧ್ಯ ಕ್ಷೇತ್ರದ ಮೇಲೆ ತನ್ನ ಪ್ರಭುತ್ವ ನೆಲೆಗೊಳಿಸಿದ. ದಕ್ಷಿಣದಲ್ಲಿ ಅನಾಂ, ಕಾಂಬೋಡಿಯ, ಪಶ್ಚಿಮದಲ್ಲಿ ಪಾರ್ಸಿಸ್ತಾನ್, ಕ್ಯಾಸ್ಪಿಯನ್ ಸಾಗರದವರೆಗೆ ಹೋದ. ಈ ಮಹಾ ಸಾಮ್ರಾಜ್ಯದೊಳಗೆ ಕೊರಿಯದ ಒಂದು ಭಾಗವೂ ಸೇರಿತು. ಸಿ-ಅನ್-ಫು ಆ ಸಾಮ್ರಾಜ್ಯದ ರಾಜಧಾನಿ. ಪೂರ್ವ ಆಸಿಯದಲ್ಲಿ ವೈಭವಕ್ಕೂ ಸಂಸ್ಕೃತಿಗೂ ಈ ನಗರ ಹೆಸರುವಾಸಿಯೆನಿಸಿತ್ತು. ಸ್ವತಂತ್ರವಾಗಿದ್ದ ಜಪಾನ್, ದಕ್ಷಿಣ ಕೊರಿಯಗಳಿಂದ ಇಲ್ಲಿಗೆ ರಾಯಭಾರಗಳೂ, ನಿಯೋಗ ಗೋಷ್ಠಿಗಳೂ ಬರುತ್ತಿದ್ದವು. ನಾಗರಿಕತೆ, ಕಲೆ, ದರ್ಶನಗಳನ್ನು ಅಧ್ಯಯನಮಾಡಿ ಹೋಗುತ್ತಿದ್ದವು.

ಟಂಗ್ ರಾಜವಂಶದವರು ವಿದೇಶೀ ವ್ಯಾಪಾರಕ್ಕೂ ವಿದೇಶೀ ವರ್ತಕರಿಗೂ ಪ್ರೋತ್ಸಾಹ ಕೊಡುತ್ತಿದ್ದರು. ಚೀನಕ್ಕೆ ಬಂದ, ನೆಲೆಸಿದ ಪರದೇಶಿಗಳಿಗಾಗಿ ವಿಶೇಷ ಶಾಸನಗಳನ್ನು ಮಾಡಿದರು. ಆಯಾಯಾ ಜನರ ನ್ಯಾಯಶಾಸ್ತ್ರಸಮ್ಮತವಾಗಿ ನ್ಯಾಯ ವಿಚಾರಣೆ ನಡೆಸಲು ಎಲ್ಲೆಲ್ಲಿ ಸಾಧ್ಯವೊ ಅಲ್ಲೆಲ್ಲ ಏರ್ಪಡಿಸಿದರು ಕ್ರಿಸ್ತಶಕ ೩೦೦ರ ಸುಮಾರಿನಲ್ಲಿ ದಕ್ಷಿಣ ಚೀನಾದಲ್ಲಿ, ಕ್ಯಾಂಟನ್ ಬಳಿ ಅರಬರು ಬಂದು ನೆಲೆಸುತ್ತಿದ್ದರು. ಇದು ಮೊಹಮದ್ ಪೈಗಂಬರನ ಜನನಕ್ಕೆ ಮೊದಲೇ ನಡೆಯಿತು. ಈ ಅರಬರ ಸಹಾಯದಿಂದ ಸಮುದ್ರವ್ಯಾಪಾರ ಬೆಳೆಯಿತು; ಚೀನೀ ಅರಬ್ಬೀ ನಾವೆಗಳಲ್ಲಿ ವ್ಯಾಪಾರ ಪದಾರ್ಥಗಳು ಹೋಗುತ್ತಿದ್ದವು.

ಬಹು ಪೂರ್ವ ಕಾಲದಲ್ಲೇ ಚೀನಾದಲ್ಲಿ (ಸೆನ್ಸಸ್) ಜನಗಣತಿ ನಡೆಯುತ್ತಿತ್ತು. ಕ್ರಿಸ್ತಶಕ ೧೫೬ರಲ್ಲೇ ಚೀನಾದಲ್ಲಿ ಜನಗಣತಿ ನಡೆಯಿತಂತೆ. ಇದು ಹಾನ್ ವಂಶೀಯರ ಕಾಲದಲ್ಲಿರಬೇಕು. ಆಗಿನ ಜನಗಣತಿಯಲ್ಲಿ ವ್ಯಕ್ತಿಗಳನ್ನೆಣಿಸುತ್ತಿರಲಿಲ್ಲ; ಕುಟುಂಬಗಳನ್ನು ಎಣಿಸುತ್ತಿದ್ದರು ಪ್ರತಿ ಸಂಸಾರದಲ್ಲೂ ಸುಮಾರು ಐದು ಮಂದಿಯೆಂದು ನಿಗದಿಯಾಗಿತ್ತು. ಈ ಲೆಕ್ಕದಂತೆ ಕ್ರಿಸ್ತಶಕ ೧೫೬ರಲ್ಲಿ ಚೀನಾದಲ್ಲಿ ೫೦,೦೦೦,೦೦೦ ಜನರಿದ್ದರು. ಇದು ಬಹಳ ನಿಖರವಾದ ಪದ್ಧತಿಯಲ್ಲ. ಅದರೆ ಪಶ್ಚಿಮ ದೇಶಗಳಲ್ಲಿ ಈ ಜನಗಣತಿಯೆಂಬುದೇ ಹೊಸ

ಕಲ್ಪನೆ. ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ೧೫೦ ವರ್ಷಗಳ ಹಿಂದೆ ಮೊದಲು ಜನಗಣತಿ ನಡೆಸಿದರು.

ಟಂಗ್ ಮನೆತನದ ಆರಂಭದಶೆಯಲ್ಲಿ ಚೀನಾದಲ್ಲಿ ಈಸಾಯಿ, ಇಸ್ಲಾಂ ಮತಗಳೆರಡೂ ವಿಸ್ತರಿಸಿದವು. ಪಶ್ಚಿಮ ದೇಶಗಳಲ್ಲಿ ಈಸಾಯಿಗಳಲ್ಲಿ ಒಂದು ಪಂಗಡದವರಿದ್ದರು. ಇತರರು ಅದನ್ನು ಪಾಷಂಡ ಮತವೆಂದು ಕರೆದು ಅದನ್ನು ಓಡಿಸಿಬಿಟ್ಟರು. ಆ ಪಾಷಂಡ ಮತ ಚೀನಾಕ್ಕೆ ಬಂದು ಈಸಾಯಿ ಮತವನ್ನೂ ತಂದಿತು. ಈ ಪಾಷಂಡಿಗಳಿಗೆ 'ನೆಸ್ಟೋರಿಯನ್ಸ್' ಎಂದು ಹೆಸರು. ಈಸಾಯಿ ಪಂಗಡಗಳಿಗೆ ಒಳ ಜಗಳವಾಗುತ್ತಿತ್ತೆಂದು ನಿನಗೆ ಹೇಳಿದೇನೆ. ಹೀಗೆ ಜಗಳವಾಡಿಯೇ ರೋಮಿನಿಂದ ನೆಸ್ಟೋರಿಯನ್ನರನ್ನು ಓಡಿಸಿ ಬಿಟ್ಟದ್ದು. ಅವರು ಚೀನಾ, ಪಾರ್ಶಿಸ್ತಾನ್ ಆಸಿಯಾದ ನಾನಾ ದೇಶಗಳನ್ನು ಹೊಕ್ಕರು. ಭಾರತಕ್ಕೂ ಬಂದು ಕೊಂಚ ಪ್ರಯೋಜನ ಹೊಂದಿದರು. ಆದರೂ ಅನಂತರ ಬಂದ ಇತರ ಈಸಾಯಿ ಪಂಗಡಗಳೂ, ಇಸ್ಲಾಮೂ ನೆಸ್ಟೋರಿಯನ್ನರನ್ನು ನುಂಗಿ ನಿರ್ನಾಮ ಮಾಡಿ ಬಿಟ್ಟವು. ಕಳೆದ ವರ್ಷ ನಾವು ದಕ್ಷಿಣ ಭಾರತಕ್ಕೆ ಹೋಗಿದ್ದೆವಲ್ಲ; ಆಗ ಅಲ್ಲೊಂದು ನೆಸ್ಟೋರಿಯನ್ನರ ನೆಲೆಯನ್ನು ಕಂಡು ನನಗೆ ಅತ್ಯಾಶ್ಚರ್ಯವಾಯಿತು. ನಿನಗೆ ನೆನಪಿದೆಯೆ ? ಅವರ ಬಿಷಪ್ ನಮ್ಮನ್ನು ಕರೆದು ಚಹಾ ಕೊಟ್ಟ. ಆ ಮುದುಕನ್ನ ನೋಡುವುದಕ್ಕೆ ನನಗೆ ಸಂತೋಷವಾಗಿತ್ತು.

ಈಸಾಯಿ ಧರ್ಮ ಚೀನಾಕ್ಕೆ ಬರಲು ಕೊಂಚ ಕಾಲ ಹಿಡಿಯಿತು. ಇಸ್ಲಾಂ ಜಾಗ್ರತೆಯಾಗಿ ಬಂತು ಇದು ನೆಸ್ಟೋರಿಯನ್ನರಿಗೆ ಮೊದಲೇ, ಪೈಗಂಬರನು ಜೀವಂತನಾಗಿರುವಾಗಲೇ ಬಂತು. ಚೀನಾ ಚಕ್ರವರ್ತಿಯು ಇಸ್ಲಾಂ ಮತ್ತು ಈಸಾಯಿ ರಾಯಭಾರಗಳನ್ನು ಕರೆಸಿ ಗೌರವಿಸಿದ ; ಅವರು ಹೇಳಿದ್ದನ್ನೆಲ್ಲ ಕೇಳಿದನು. ಅವರು ಹೇಳಿದ್ದನ್ನೆಲ್ಲ ಬಹುಮಾನಿಸಿ, ಸಮಾನವಾಗಿ ಅವುಗಳಿಗೆ ಪುರಸ್ಕಾರವಿತ್ತ. ಕ್ಯಾಂಟನ್ನಲ್ಲಿ ಮಸೀತಿಯನ್ನು ಕಟ್ಟಿಕೊಳ್ಳಿರೆಂದು ಅರಬರಿಗೆ ಅನುಜ್ಞೆ ಕೊಡಲಾಯಿತು. ೧೩೦೦ ವರ್ಷಗಳಷ್ಟು ಹಳೆಯದಾದರೂ ಆ ಮಸೀತಿ ಇನ್ನೂ ಇದೆ. ಜಗತ್ತಿನ ಅತ್ಯಂತ ಹಳೇ ಮಸೀತಿಗಳಲ್ಲೆಲ್ಲ ಅದೂ ಒಂದು.

ಹಾಗೆಯೇ ಟಂಗ್ ಚಕ್ರವರ್ತಿಯು ಈಸಾಯಿ ಚರ್ಚನ್ನೂ ಮಠವನ್ನೂ ಕಟ್ಟಲು ಅನುಜ್ಞೆಯಿತ್ತನು. ಈ ಕಾಲದಲ್ಲಿ ಪಾಶ್ಚಾತ್ಯ ಅರಸರ ಪರಮತ ದ್ವೇಷಕ್ಕೂ ಚೀನಾ ಚಕ್ರವರ್ತಿಯ ಪರಮತ ಸಹಿಷ್ಣುತೆಗೂ ಎಷ್ಟು ಹೋಲಿಕೆ ಇದೆಯೋ ನೋಡು.

ಅರಬರು ಚೀನಾದಿಂದ ಮೊದಲು ಕಾಗದ ಮಾಡುವುದನ್ನು ಕಲಿತರಂತೆ. ಅಮೇಲೆ ಅದನ್ನು ಐರೋಪ್ಯರಿಗೆ ಕಲಿಸಿದರಂತೆ. ಕ್ರಿಸ್ತಶಕ ೭೫೧ ರಲ್ಲಿ

ಮಧ್ಯ ಏಸಿಯದ ತುರ್ಕಿಸ್ತಾನದಲ್ಲಿ ಚೀನರಿಗೂ ಮುಸ್ಲಿಂ ಅರಬರಿಗೂ ಯುದ್ಧವಾಯಿತು. ಅರಬರು ಹಲವರು ಚೀನರನ್ನು ಬಂಧಿಸಿದರು. ಈ ಬಂದಿಗಳು ಕಾಗದ ಮಾಡುವುದನ್ನು ಕಲಿಸಿದರು.

ಟಂಗರು ೩೦೦ ವರ್ಷ ರಾಜ್ಯ ಆಳಿದರು. ಕ್ರಿಸ್ತಶಕ ೯೦೭ಕ್ಕೆ ಅವರ ಆಳ್ವಿಕೆ ಮುಗಿಯಿತು. ಈ ಮೂರು ಶತಮಾನಗಳು ಚೀನಾದ ಮಹಾ ಕಾಲವೆಂದು ಹಲವರು ಹೇಳುತ್ತಾರೆ. ಚೀನಾದ ಸಂಸ್ಕೃತಿ ಮಹೋನ್ನತ ಪದವಿಗೇರಿತು; ಜನರ ಜೀವನವಾದರೂ ನೆಮ್ಮದಿಗೊಂಡಿತು; ಅವರ ಸಂತೋಷದ ಮಟ್ಟವೇರಿತು. ಪಾಶ್ಚಿಮಾತ್ಯರು ಅನಂತರ ಅನೇಕ ವಿಚಾರಗಳನ್ನು ತಿಳಿದುಕೊಂಡರು. ಇದಕ್ಕೆ ಮೊದಲೇ ಚೀನರು ಇದನ್ನೆಲ್ಲ ಕಲಿತಿದ್ದರು. ಕಾಗದದ ವಿಚಾರ ಆಗಲೆ ಹೇಳಿದೆ. ಫಿರಂಗಿ ಮದ್ದು ಮತ್ತೊಂದು. ಚೀನರು ನಿಪುಣರಾದ ಇಂಜಿನಿಯರುಗಳು; ಅನೇಕ ವಿಚಾರಗಳಲ್ಲಿ ಅವರು ನೈಪುಣ್ಯದಲ್ಲಿ ಐರೋಪ್ಯರಿಗಿಂತ ಎಷ್ಟೋ ಮುಂದುವರಿದಿದ್ದರು. ಇವರು ಎಲ್ಲದರಲ್ಲೂ ಇಷ್ಟು ಮುಂದಾಗಿದ್ದೂ ಕೂಡ ವಿಜ್ಞಾನದಲ್ಲೂ, ಪರಿಶೋಧನೆಯಲ್ಲೂ ಯೂರೋಪನ್ನು ಮೀರಿಸಲಿಲ್ಲವೇಕೆ? ಮಕ್ಕಳು ಮುದುಕರನ್ನು ಹಿಂದೆ ಹಾಕುವಂತೆ ಯೂರೋಪು ಕೊಂಚ ಕೊಂಚವಾಗಿ ಕವಲುತ್ತ ಚೀನಾಕ್ಕೆ ಸರಿಸಮಾನವಾಗಿ ಬಂತು; ಕೆಲವು ವಿಚಾರಗಳಲ್ಲಿ ಮುಂದುವರಿಯಿತು. ಜನಾಂಗದ ಚರಿತ್ರೆಗಳಲ್ಲಿ ಹೀಗೇಕಾಗುತ್ತದೋ ದಾರ್ಶನಿಕರಿಗೂ ಸಹಾ ವಿಚಾರ ಮಾಡುವುದು ಕಷ್ಟ. ನೀನು ಇನ್ನೂ ದರ್ಶನ ಓದುವ ವಯಸ್ಸಿನವಳಲ್ಲವಾಗಿ ನಿನಗಾ ಚಿಂತೆಯೇಕೆ? ನಾನೂ ಆ ತಾಪತ್ರಯ ಕಟ್ಟಿಕೊಳ್ಳುವುದಿಲ್ಲ

ಈ ಕಾಲದಲ್ಲಿ ಚೀನಾದ ಮಹತ್ತು ಏಸಿಯದ ಇತರ ಕಡೆಗಳ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡಿತು. ಎಲ್ಲ ದೇಶಗಳೂ ಕಲೆ, ನಾಗರಿಕತೆಗೆ ಚೀನಾದ ಕಡೆ ನೋಡುತ್ತಿದ್ದವು. ಗುಪ್ತ ಸಾಮ್ರಾಜ್ಯದನಂತರ ಭಾರತದ ತಾರಾಗಣದ ಪ್ರಕಾಶ ಮಂಕಾಗುತ್ತಾ ಬಂತು. ಚೀನಾದ ನಾಗರಿಕತೆ ಪ್ರಗತಿ ಹೆಚ್ಚಿತು; ಸಹಜವಾಗಿ ಭೋಗ ಜೀವನ, ಸೋಮಾರಿ ಜೀವನ ಬಲವಾಯಿತು. ರಾಷ್ಟ್ರದಲ್ಲಿ ಅನೀತಿಗಾರಂಭವಾಯಿತು. ಸಹಜವಾಗಿ ಕಂದಾಯ ಕವಳಿಗೆಗಳ ಭಾರ ಹೆಚ್ಚಿತು. ಇದರಿಂದ ಟಂಗ್ ಮನೆತನದವರೆಂದರೆ ಚೀನರಿಗೆ ಬೇಸರವಾಯಿತು. ಆ ರಾಜವಂಶವನ್ನು ಕೊನೆಗಾಣಿಸಿದರು.

೪೨

# ಛೋಸೆನ್ ಮತ್ತು ದೈ ನಿಪೋನ್

ಮೆ ೮, ೧೯೩೨

ಜಗತ್ಕಥೆಯನ್ನು ಮುಂದುವರಿಸುತ್ತ ಹೋದಂತೆಲ್ಲ ಹೆಚ್ಚು ಹೆಚ್ಚು ದೇಶಗಳು ನಮ್ಮ ಗಮನಕ್ಕೆ ಬರುತ್ತವೆ. ಚೀನಾಕ್ಕೆ ಸಮೀಪವರ್ತಿಗಳೂ ಅನೇಕ ವಿಚಾರಗಳಲ್ಲಿ ಚೀನಾದ ನಾಗರಿಕತೆಯ ಮಕ್ಕಳೂ ಎನಿಸಿದ ಕೊರಿಯ, ಜಪಾನುಗಳ ಕಡೆ ನೋಡಬೇಕು. ಆಸಿಯಾ ಖಂಡದ ತೀರ ಅಂಚಿನಲ್ಲಿ–ಪೂರ್ವಾಂತ್ಯದಲ್ಲಿ–ಇವೆ ಈ ದೇಶಗಳು. ಈ ದೇಶಗಳಾಚೆ ಪೆಸಿಫಿಕ್ ಸಾಗರ ಇದೆ. ಇತ್ತೀಚಿನವರೆಗೆ ಅಮೆರಿಕದೊಂದಿಗೆ ಜಗತ್ತಿಗೆಸಂಬಂಧವೇ ಇರಲಿಲ್ಲ. ಆದ ಕಾರಣ ಕೊರಿಯ ಜಪಾನುಗಳ ಸಂಬಂಧವೆಲ್ಲ ಚೀನಾ ಮಹಾರಾಷ್ಟ್ರದೊಂದಿಗೇ ಇತ್ತು. ಧರ್ಮ ಕಲೆ ನಾಗರಿಕತೆ ಇವುಗಳೆಲ್ಲ ಕೊರಿಯಾ, ಜಪಾನುಗಳಿಗೆ ಚೀನಾದಿಂದ, ಚೀನಾದ ಮೂಲಕವೇ ಬಂತು. ಚೀನಾಕ್ಕೆ ಕೊರಿಯಾ ಜಪಾನುಗಳ ಸಾಲ ಅಷ್ಟಿಷ್ಟಲ್ಲ. ಭಾರತಕ್ಕೂ ಅವರ ಋಣ ಕೊಂಚವಿದೆ. ಭಾರತದಿಂದ ಕೊರಿಯಾ, ಜಪಾನರು ಪಡೆದದ್ದನ್ನೆಲ್ಲ ಅವರು ಚೀನಾದ ಮೂಲಕ ಪಡೆದರು ; ಅದೆಲ್ಲ ಚೀಣದ ಜೀವನರಾಗ ರಂಜಿತವಾಗಿತ್ತು.

ಆಸಿಯಾ ಖಂಡ ಮತ್ತು ಇತರ ಕಡೆ ಏನೇ ನಡೆಯಲಿ, ಅವುಗಳ ಪರಿಣಾಮಕ್ಕೆ ಕೊರಿಯ ಜಪಾನುಗಳು ಒಳಗಾಗಲಿಲ್ಲ ; ಏಕೆಂದರೆ ಆ ದೇಶಗಳಿದ್ದ ಬಗೆ ಹಾಗೆ. ಚಟುವಟಿಕೆಗಳ ಕೇಂದ್ರದಿಂದ ಅವು ದೂರವಾಗಿದ್ದವು ; ಅಷ್ಟುಮಟ್ಟಿಗೆ ಅವುಗಳ ಅದೃಷ್ಟವೇ ಅದೃಷ್ಟ. ಮುಖ್ಯವಾಗಿ ಜಪಾನಿನ ಅದೃಷ್ಟಕ್ಕೆ ಪಾರವೇ ಇಲ್ಲ. ಆದಕಾರಣ ಇತ್ತೀಚಿನ ಇತಿಹಾಸದ ಕಾಲದವರೆಗೆ ಆ ದೇಶಗಳನ್ನು ನಾವು ಯಾವ ತೊಂದರೆಯೂ ಇಲ್ಲದೆ ಮರೆತು ಬಿಡಬಹುದು. ಹೀಗೆ ಮಾಡಿದ್ದರಿಂದ ಆಸಿಯಾ ಖಂಡದ ಇತರ ಭಾಗಗಳ ಜ್ಞಾನ ಸಂಬಂಧವಾಗಿ ನಮಗೇನೂ ಕೊರತೆಯಾಗುವ ಹಾಗಿಲ್ಲ. ಮಲೇಷಿಯ ಮತ್ತು ಪೂರ್ವ ದ್ವೀಪಗಳನ್ನು ನಾವು ಬಿಟ್ಟದೇವೆಯೆ ; ಅವುಗಳ ಪ್ರಾಚೀನೇತಿಹಾಸವನ್ನು ತಿಳಿದುಕೊಂಡಿಲ್ಲವೆ ! ಹಾಗೆಯೇ ಇವುಗಳನ್ನೂ ನಾವು ಬಿಡಬೇಕಾಗಿಲ್ಲ. ಕೊರಿಯಾ–ಅಯ್ಯೋ ಪಾಪ ಆ ದೇಶವನ್ನು ಇಂದು ಎಲ್ಲರೂ ಮರತೇ ಹೋಗಿ

ದಾರೆ. ಜಪಾನು ಅದನ್ನು ನುಂಗಿ ಬಿಟ್ಟಿದೆ; ತನ್ನ ಸಾಮ್ರಾಜ್ಯ ಗರ್ಭದೊಳಗೆ ಸೇರಿಸಿಕೊಂಡು ಬಿಟ್ಟಿದೆ. ಕೊರಿಯವಿನ್ನೂ ಸ್ವಾತಂತ್ರ್ಯದ ಕನಸನ್ನು ಕಾಣುತ್ತಿದೆ; ಅದರ ಸಾಧನೆಗಾಗಿ ಒದ್ದಾಡುತ್ತಿದೆ. ಈಗ ಎಲ್ಲರ ಬಾಯಲ್ಲೂ ಜಪಾನೆ. ಅದು ಚೀನಾವನ್ನಾಕ್ರಮಿಸಿದೆಯೆಂದು ಎಲ್ಲ ಪತ್ರಿಕೆಗಳೂ ಬಡಿದು ಬರೆಯುತ್ತಿವೆ. ಪತ್ರಿಕೆಗಳ ತುಂಬ ಈ ಪ್ರತಿಭಟನೆಯೇ. ನಾನೀಗ ಬರೆಯುತ್ತಿರುವೆನಲ್ಲ: ಈಗ ಮಂಚೂರಿಯಾದಲ್ಲಿ ಯುದ್ಧವಾಗುತ್ತಿದೆ. ಅದಕಾರಣ ನಾವು ಕೊರಿಯ ಜಪಾನುಗಳ ವಿಚಾರವನ್ನು ಕೊಂಚ ತಿಳಿದುಕೊಳ್ಳುವುದು ಆಗತ್ಯ. ಪ್ರಕೃತ ಪರಿಸ್ಥಿತಿಯು ನಮಗೆ ಚೆನ್ನಾಗಿ ಗೊತ್ತಾಗಬೇಕಾದರೆ ಕೊರಿಯ ಜಪಾನುಗಳ ಪ್ರಾಚೀನೇತಿಹಾಸವನ್ನು ಕೊಂಚ ತಿಳಿದುಕೊಳ್ಳಬೇಕು.

ಬಹುಕಾಲ ಅವು ಯಾವ ದೇಶಗಳೊಂದಿಗೂ ಸಂಬಂಧವಿಟ್ಟುಕೊಳ್ಳಲಿಲ್ಲವೆಂಬುದನ್ನು ಮೊದಲು ನಾವು ನೆನಪಿನಲ್ಲಿಡಬೇಕು. ನಿಜವಾಗಿಯೂ ಜಪಾನು ಯಾವ ದೇಶಕ್ಕೂ ಸಂಬಂಧವನ್ನಿಟ್ಟುಕೊಳ್ಳದೆ ಅಪಾರ ಅಪೂರ್ವ ಕಾಲ ಕಳೆಯಿತು. ಪರಕೀಯರ ಮುತ್ತಿಗೆಗಳೇನೆಂಬುದೇ ಆದಕ್ಕೆ ಗೊತ್ತಿರಲಿಲ್ಲ. ಸ್ವತಂತ್ರವಾಗಿತ್ತು. ಜಪಾನಿನ ಇತಿಹಾಸದೊಳಗೆಲ್ಲ ಅದನ್ನು ಮುತ್ತುವ ಪ್ರಯತ್ನವೇ ಇಲ್ಲವೆನ್ನಬಹುದು. ಆದ ಮುತ್ತಿಗೆಗಳೊಂದೆರಡೂ ಸಫಲವಾಗಲಿಲ್ಲ. ಇದುವರೆಗೆ ಜಪಾನಿನ ಕಷ್ಟಗಳೆಲ್ಲ ಒಳನಾಡಿಗೆ ಸಂಬಂಧಪಟ್ಟವುಗಳೆ. ಕೊಂಚ ಕಾಲದವರೆಗೆ ಜಪಾನು ಜಗತ್ತಿನೊಂದಿಗೇ ಸಂಪೂರ್ಣವಾಗಿ ತನ್ನ ಸಂಬಂಧ ಲೇಶವೂ ಇಲ್ಲದಂತೆ ಮಾಡಿಕೊಂಡಿತು. ಜಪಾನೀಗಳು ತಮ್ಮ ದೇಶ ಬಿಟ್ಟು ಹೊರಕ್ಕೆ ಹೋಗಲಾಗುತ್ತಿರಲಿಲ್ಲ; ಪರಕೀಯರಾರೂ ಜಪಾನಿನೊಳಕ್ಕೆ ಕಾಲಿಡಲಾಗುತ್ತಿರಲಿಲ್ಲ. ಚೀಣರು ಸಹ ಜಪಾನಿನೊಳಕ್ಕೆ ಹೋಗಲಾಗುತ್ತಿರಲಿಲ್ಲ. ಯೂರೋಪು ಖಂಡದ ಪರಕೀಯರಿಂದ, ಈಸಾಯಿ ಮಿಷನರಿ-ಪಾದ್ರಿಗಳಿಂದ ರಕ್ಷಿಸಿಕೊಳ್ಳಲಿಕ್ಕಾಗಿ ಹೀಗೆ ಮಾಡಲಾಗಿತ್ತು. ಇದಕ್ಕಿಂತ ಭಯಂಕರವೂ ಅವಿವೇಕವೂ ಆದ ಕೆಲಸವಿನ್ನಿಲ್ಲ. ಜಪಾನು ದೇಶವನ್ನೆಲ್ಲ ಸೆರೆಮನೆಯಲ್ಲಿಟ್ಟಂತಾಯಿತು. ಒಳ್ಳೆಯದಾಗಲಿ, ಕೆಟ್ಟದ್ದಾಗಲಿ ಹೊರಗಿನ ಜೀವನ ಪ್ರಭಾವವೇ ಇದರ ಮೇಲೆ ಬೀಳದಂತಾಯಿತು. ಅಮೇಲೆ ಇದ್ದಕ್ಕಿದ್ದ ಹಾಗೆಯೇ ಜಪಾನು ತನ್ನ ಬಾಗಿಲುಗಳನ್ನೆಲ್ಲ ತೆರೆಯಿತು; ಕಿಟಕಿಗಳ ಬಾಗಿಲುಗಳನ್ನೆಲ್ಲ ತೆರೆದುಬಿಟ್ಟಿತು. ಯೂರೋಪಿನ ಕಡೆ ನೋಡಿತು; ಅಲ್ಲಿ ಕಲಿತುಕೊಳ್ಳಬಹುದಾದುದನ್ನೆಲ್ಲ ಕಲಿಯಲಾರಂಭಿಸಿತು. ಮಹಾ ಶ್ರದ್ಧೆಯಿಂದ ಕಲಿಯಿತು; ಒಂದೆರಡು ತಲೆಮಾರಿನೊಳಗೇ ಹೊರಗೆ ನೋಡಿದರೆ ಜಪಾನು ಎಲ್ಲಾ ಐರೋಪ್ಯ

ದೇಶಗಳಂತೆ ಕಾಣಲಾರಂಭಿಸಿತು. ಆ ದೇಶಗಳ ಕೆಟ್ಟ ಚಾಳಿಗಳನ್ನೆಲ್ಲ ಚೆನ್ನಾಗಿ ಅನುಕರಿಸಿ ಬಿಟ್ಟಿತು! ಇದೆಲ್ಲ ಈ ೭೦ ವರ್ಷಗಳಲ್ಲಿ ನಡೆಯಿತು.

ಚೀನಾದ ಚರಿತ್ರೆ ಮೊದಲಾದ ದೀರ್ಘ ಕಾಲಾನಂತರ ಆರಂಭವಾಯಿತು ಕೊರಿಯಾ ದೇಶದ ಚರಿತ್ರೆ ಕೊರಿಯಾ ದೇಶದ ಚರಿತ್ರೆ ಮೊದಲಾದ ದೀರ್ಘ ಕಾಲಾನಂತರ ಜಪಾನಿನ ಚರಿತ್ರೆ ಆರಂಭವಾಯಿತು. ಕಳೆದ ವರ್ಷ ನಿನಗೊಂದು ಕಾಗದ ಬರೆದಿದ್ದೆ; ಅದರಲ್ಲಿ ದೇಶಭ್ರಷ್ಟನಾದ ಕಿತ್ಸೆ ಎಂಬ ಚೀಣದವನ ಕತೆ ಹೇಳಿದ್ದೆ. ಚೀಣದಲ್ಲಿ ರಾಜಮನೆತನವೊಂದರ ಬದಲಾವಣೆ ಆಯಿತು. ಈ ಬದಲಾವಣೆ ಕಿತ್ಸೆಗೆ ಸರಿಬೀಳಲಿಲ್ಲ. ೫೦೦೦ ಚೀಣರೊಂದಿಗೆ ಕಿತ್ಸೆಯು ಪೂರ್ವಾಭಿಮುಖವಾಗಿ ಹೊರಟ. ಕೊರಿಯದಲ್ಲಿ ಬಂದು ನೆಲೆಸಿದ. ಉಷಃಕಾಲದ ಪ್ರಶಾಂತ ಪ್ರದೇಶ—'ಅರಿಷದ ನೆಲ'ವೆಂದು ಆದಕ್ಕೆ ಹೆಸರಿಟ್ಟ. ಇದು ನಡೆದದ್ದು ಕ್ರಿಸ್ತಪೂರ್ವ ೧೧೨೨ ರಲ್ಲಿ. ಕಿತ್ಸೆ ತನ್ನ ಜತೆಯಲ್ಲೇ ಚೀಣದ ಕಲೆ, ಕೈಗಾರಿಕೆ, ವ್ಯವಸಾಯ, ರೇಶಿಮೆ ಉದ್ಯೋಗ ಇವುಗಳನ್ನೆಲ್ಲ ತಂದ. ೯೦೦ ವರ್ಷಗಳ ಮೇಲೆ ಕಿತ್ಸೆ ಮನೆತನದವರು ಅರಿಷದ ರಾಷ್ಟ್ರ-ಛೋಸೆನ್ ಆಳಿದರು. ಆಗಾಗ ಚೀಣರು ಇಲ್ಲಿಗೆ ಬಂದು ನೆಲೆಸುತ್ತಿದ್ದರು. ಹೀಗೆ ಚೀಣಕ್ಕೂ ಛೋಸೆನ್‌ಗೂ ನಿಕಟ ಸಂಬಂಧವಿತ್ತು.

ಚೀನಾದಲ್ಲಿ ಷಿಹ್ವಾಂಗ್ ತಿ ಯು ಚಕ್ರವರ್ತಿ. ಆಗ ಚೀಣರ ದೊಡ್ಡ ಗುಂಪೊಂದು ಛೋಸೆನ್‌ಗೆ ಬಂತು. ಭಾರತದ ಅಶೋಕ ಚಕ್ರವರ್ತಿಯ ಸಮಕಾಲೀನ ಷಿ ಹ್ವಾಂಗ್ ತಿ ಚಕ್ರವರ್ತಿ. 'ಪ್ರಥಮ ಚಕ್ರವರ್ತಿ' ಎಂದು ಕರೆಸಿಕೊಂಡವನೀತನೇ. ಹಳೆಯ ಗ್ರಂಥಗಳನ್ನೆಲ್ಲ ತರಿಸಿ ಅವುಗಳಿಗೆ ಬೆಂಕಿ ಇಟ್ಟವನೀತನೇ. ಈ ಚಕ್ರವರ್ತಿಯ ನಿಷ್ಠುರ ಪ್ರಭುತ್ವ ದುಃಖವನ್ನು ಸೈರಿಸಲಾರದೆ ಎಷ್ಟೋ ಮಂದಿ ಚೀಣರು ದುರ್ಬಲರಾದ ಕಿತ್ಸೆ ವಂಶೀಯರನ್ನೋಡಿಸಿ, ಕೊರಿಯದಲ್ಲಿ ತಲೆ ಮರೆಸಿಕೊಂಡರು. ಇದಾದ ಮೇಲೆ ಛೋಸೆನ್ ೮೦೦ ವರ್ಷಗಳ ಕಾಲ ಅನೇಕ ಸಂಸ್ಥಾನಗಳಾಗಿ ವಿಭಾಗಿಸಲ್ಪಟ್ಟಿತು. ಈ ಸಂಸ್ಥಾನಗಳು ಪರಸ್ಪರ ಕಡಿದಾಡುತ್ತಿದ್ದವು. ಒಮ್ಮೆ ಸಂಸ್ಥಾನವೊಂದು ಚೀನಾದ ಸಹಾಯ ಬೇಡಿತು. ಇಂತಹ ಭಯಂಕರ ಪ್ರಾರ್ಥನೆ ಮಾಡಬಹುದೆ? ಚೀಣರ ಸಹಾಯವೇನೋ ಬಂತು; ಆದರೆ ಚೀಣರು ಹಿಂದಕ್ಕೆ ಹೋಗಲಿಲ್ಲ! ಬಲಯುತ ರಾಜ್ಯಗಳ ನೀತಿಯೇ ಹೀಗೆ. ಚೀಣವು ದೀರ್ಘ ಕಾಲ ನಿಂತಿತು; ಛೋಸೆನ್ ದೇಶದ ಬಹುಭಾಗವು ಚೀಣಾ ಸಾಮ್ರಾಜ್ಯದೊಳಕ್ಕೆ ಸೇರಿಹೋಯಿತು. ಉಳಿದ ಛೋಸೆನ್ ದೇಶವು ಸಹ ಚೀನಾ ಚಕ್ರವರ್ತಿಗಳಾದ ಟಂಗರಿಗೆ ಅಧೀನವಾಗಿತ್ತು.

ಕ್ರಿಸ್ತಶಕ ೯೩೫ರಲ್ಲಿ ಛೋಸೆನ್ ದೇಶವು ಒಂದಾಯಿತು; ಸ್ವತಂತ್ರವಾಯಿತು. ವಂಗ್ ಕಿಯಾನ್ ಎಂಬಾತನೇ ಐಕ್ಯತೆಯನ್ನೂ ಸ್ವಾತಂತ್ರ್ಯವನ್ನೂ

ಸ್ಥಾಪಿಸಿದವನು. ೫೫೦ ವರ್ಷಗಳ ಕಾಲ ಅವನ ವಂಶೀಯರು ಈ ರಾಜ್ಯವನ್ನಾಳಿದರು.

ಎರಡು ಮೂರು ವಾಕ್ಯಬೃಂದಗಳಲ್ಲಿ ಕೊರಿಯಾ ದೇಶದ ೨೦೦೦ ವರ್ಷಗಳ ಮೇಲಿನ ಚರಿತ್ರೆಯನ್ನು ಹೇಳಿ ಮುಗಿಸಿದೇನೆ. ಕೊರಿಯವು ಚೀನಾಕ್ಕೆ ಮಹಾ ಋಣಿಯೆಂಬ ದೊಡ್ಡ ಅಂಶವೊಂದನ್ನು ನೆನಪಿನಲ್ಲಿಡಬೇಕು ಬರಹದ ಕಲೆ ಕೊರಿಯಕ್ಕೆ ಬಂದುದು ಚೀನಾದಿಂದ. ೧೦೦೦ ವರ್ಷಗಳಕಾಲ ಕೊರಿಯರು ಚೀನಾದ ಲಿಪಿಯನ್ನು ಬಳಸಿದರು ಚೀನಾದ ಲಿಪಿಯೆಂದರೆ ಅಕ್ಷರಗಳಲ್ಲ; ಭಾವಗಳನ್ನೂ ಪದಗಳನ್ನೂ ಸಮಾಸಪದಗಳನ್ನೂ ಸೂಚಿಸುವ ಸಂಕೇತಗಳೆಂಬುದು ನಿನಗೆ ನೆನಪಿರಬೇಕು. ಅನಂತರ ಈ ಚಿತ್ರಲಿಪಿಯಿಂದ ತನ್ನ ಭಾಷೆಗೆ ಒಪ್ಪುವಂತಹ ವಿಶೇಷ ಲಿಪಿಯೊಂದನ್ನು ಕೊರಿಯದವರು ರೂಪಿಸಿಕೊಂಡರು.

ಬೌದ್ಧ ಧರ್ಮ, ಕನ್‌ಫ್ಯೂಷಿಯ ದರ್ಶನವೂ ಸಹ ಚೀನಾದಿಂದ ಬಂದವು. ಕಲಾಪ್ರಭಾವವಂತೂ ಭರತಖಂಡದಿಂದ ಹೊರಟು, ಚೀನಾದ ಮೂಲಕ ಪ್ರಯಾಣ ಮಾಡಿ ಕೊರಿಯ ಜಪಾನುಗಳಿಗೆ ಬಂತು. ಕೊರಿಯವು ಅಪೂರ್ವವಾದ ಕಲಾವಸ್ತುಗಳನ್ನು, ಮುಖ್ಯವಾಗಿ ವಾಸ್ತುಶಿಲ್ಪಗಳನ್ನು ಸೃಷ್ಟಿಸಿತು. ಕೊರಿಯದ ವಾಸ್ತುಶಿಲ್ಪವು ಚೀನಾದ ವಾಸ್ತುಶಿಲ್ಪವನ್ನೇ ಹೋಲಿತು ನೌಕಾರಚನಾವೃತ್ತಿಯಲ್ಲಿಯೂ ವಿಶೇಷ ಪ್ರಗತಿಯುಂಟಾಯಿತು. ಕೊರಿಯದ ಜನರೊಮ್ಮೆ ನೌಕಾಬಲವನ್ನು ವಿಶೇಷವಾಗಿ ಬೆಳೆಸಿಕೊಂಡು ಜಪಾನನ್ನು ಮುತ್ತಿದರು.

ಬಹುಶಃ ಇಂದಿನ ಜಪಾನಿನವರ ಮೂಲಪುರುಷರು ಕೊರಿಯ–ಛೋಸೆನ್ ದೇಶದಿಂದಲೇ ಬಂದಿರಬೇಕು. ಮತ್ತೆ ಕೆಲವರು ದಕ್ಷಿಣದ ಮಲೇಷಿಯಾದಿಂದ ಬಂದಿರಬಹುದು. ಜಪಾನಿಗಳು ಮಂಗೋಲಿಯ ಕುಲದವರೆಂಬುದು ನಿನಗೆ ಗೊತ್ತಿದೆ. ಜಪಾನಿನಲ್ಲಿ ಇಂದಿಗೂ ಅಯಿನೊಗಳೆಂಬ ಜನರಿದ್ದಾರೆ. ಅವರು ಆ ದೇಶದ ಮೂಲ ನಿವಾಸಿಗಳಿರಬೇಕೆಂಬುದು ಜನರ ಊಹೆ. ಈ ಜನರು ನೋಡಲಿಕ್ಕೆ ಲಕ್ಷಣವಾಗಿದಾರೆ. ಮೈ ಕೂದಲು ಹೆಚ್ಚು. ಜಪಾನಿಗಳಿಗೂ ಇವರಿಗೂ ಏನೂ ಸಂಬಂಧವಿಲ್ಲ. ಅಯಿನೊ ಜನರನ್ನು ಜಪಾನಿಗಳು ನಿಪ್ಪೋನ್ ದ್ವೀಪ ಸಮುದಾಯದ ಉತ್ತರ ಭಾಗಕ್ಕೆ ಓಡಿಸಿಬಿಟ್ಟಿದಾರೆ.

ಕ್ರಿಸ್ತಶಕ ೨೦೦ ಸುಮಾರಿನಲ್ಲಿ ಯಮಟ್ಟೋ ರಾಷ್ಟ್ರಕ್ಕೆ ಜಿಂಗೋ ಎಂಬಾಕೆಯೊಬ್ಬಳು ಚಕ್ರವರ್ತಿನಿಯಾಗಿದ್ದಳು. ಪೂರ್ವದಲ್ಲಿ ಜಪಾನಿಗೆ ಯಮಾತೋ ಎಂದು ಹೆಸರು; ಅಥವಾ ಯಾವ ಭಾಗದಲ್ಲಿ ಈ ಜನರು ನೆಲೆಸಿದ್ದರೋ ಅದಕ್ಕೆ ಈ ಹೆಸರಾಗಿತ್ತು. 'ಜಿಂಗೋ' ಎಂಬ ಶಬ್ದವನ್ನು ನೆನಪಿನಲ್ಲಿಡು. ಹಿಂದಿನ ಕಾಲದ ಜಪಾನಿನ ಚಕ್ರವರ್ತಿನಿಯೊಬ್ಬಳ ಹೆಸರು 'ಜಿಂಗೋ' ಎಂದಿರುವುದು ಆಶ್ಚರ್ಯಕರವಾಗಿದೆ. ಇಂಗ್ಲಿಷಿನಲ್ಲಿ 'ಜಿಂಗೋ' ಎಂಬ ಮಾತೊಂದು

ನಿಕರವಾದ ಅರ್ಥವಿದೆ. ಬಡಾಯಿಕೊಚ್ಚುವ, ದಬಾಯಿಸುವ, ಸ್ವಪ್ರತಿಷ್ಠೆಯ ಸಾಮ್ರಾಜ್ಯವಾದಿಯೆಂದು ಆ ಮಾತಿನರ್ಥ. ಅಥವಾ ಸುಮ್ಮನೆ ಸಾಮ್ರಾಜ್ಯವಾದಿಯೆಂದು ಅರ್ಥ. ಹಾಗೆಂದರೆ ಸ್ವಪ್ರತಿಷ್ಠೆಯ, ಬಡಾಯಿಕೊಚ್ಚುವ ಮನುಷ್ಯ. ಜಪಾನು ಸಹ ಈ ಸ್ವಪ್ರತಿಷ್ಠೆ ಅಥವಾ 'ಜಿಂಗೋ' ವ್ಯಾಧಿಯಿಂದ ನರಳುತ್ತಿದೆ. ಇತ್ತೀಚೆಗಂತೂ ಕೊರಿಯ, ಚೀನಾಗಳ ವಿಚಾರದಲ್ಲಿ ಬಹಳ ಅನ್ಯಾಯವಾಗಿ ವರ್ತಿಸಿದೆ. ಜಪಾನಿನ ಪ್ರಥಮ ಐತಿಹಾಸಿಕ ಚಕ್ರವರ್ತಿಗೆ "ಜಿಂಗೋ" ಎಂದು ಹೆಸರು; ಇದು ಆಶ್ಚರ್ಯಕರವಾದ ಅಂಶವಲ್ಲವೆ?

ಯಮಾತೋ ಕೊರಿಯದೊಂದಿಗೆ ಅತ್ಯಂತ ನಿಕಟಸಂಬಂಧವನ್ನಿಟ್ಟುಕೊಂಡಿತ್ತು. ಕೊರಿಯದ ಮೂಲಕ ಚೀನಾದ ನಾಗರಿಕತೆ ಯಮಾತೋಗೆ ಬಂತು. ಸುಮಾರು ಕ್ರಿಸ್ತಶಕ ೪೦೦ ರಲ್ಲಿ ಕೊರಿಯದ ಮೂಲಕ ಚೀನಾದ ಬರಹದ ಭಾಷೆ ಸಹ ಯಮಾತೋಗೆ ಬಂತು. ಹಾಗೆಯೇ ಬೌದ್ಧ ಧರ್ಮವೂ ಬಂತು. ಕ್ರಿಸ್ತಶಕ ೫೫೨ ಸುಮಾರಿನಲ್ಲಿ ಪಕಚೆ ಅರಸನು (ಕೊರಿಯ ಮೂರು ರಾಜ್ಯಗಳಾಗಿ ವಿಭಾಗವಾಗಿತ್ತು) ಯಮಾತೋ ಅರಸನಿಗೆ ಚಿನ್ನದ ಬುದ್ಧ ವಿಗ್ರಹವನ್ನೂ, ಬೌದ್ಧ ಧರ್ಮದ ಗ್ರಂಥಗಳನ್ನು ಹೊತ್ತು ಹೊರಟ ಮಿಷನರಿಗಳನ್ನೂ ಕಳುಹಿಸಿದನು.

ಷಿಂಟೊ ಜಪಾನಿನ ಹಳೆಯ ಧರ್ಮ. ಚೀನಾದ ಮಾತಿದು; "ದೇವಮಾರ್ಗ" ಎಂದು ಇದಕ್ಕರ್ಥ. ಪ್ರಕೃತಿಪೂಜೆ, ಪುರಾತನ ಪೂಜೆಗಳ ಮಿಶ್ರಧರ್ಮವಿದು. ಸತ್ತಮೇಲೆ ಜೀವದ ಹಣೆಯಬರಹವೇನು, ರಹಸ್ಯಗಳೇನು, ಸಮಸ್ಯೆಗಳೇನು, ಇವುಗಳೊಂದನ್ನೂ ಆ ಧರ್ಮ ಹಚ್ಚಿಕೊಳ್ಳಲಿಲ್ಲ. ಕ್ಷತ್ರಿಯರ ಧರ್ಮವಿದು. ಜಪಾನಿಗಳು ಚೀನೀ ಜನರ ವಿಶೇಷ ಸಮೀಪವರ್ತಿಗಳು; ತಮ್ಮ ನಾಗರಿಕತೆಗಾಗಿ ಅವರಿಗೆ ಬಹಳ ಋಣಿಗಳು. ಆದರೂ ಚೀನಾದಿಂದ ಅವರು ತೀರಾ ಭಿನ್ನರು. ಚೀನೀಜನರು ಪ್ರಧಾನವಾಗಿ ಶಾಂತಿಪ್ರಿಯರು. ಅವರ ನಾಗರಿಕತೆ, ಅವರ ಜೀವನದರ್ಶನವೆಲ್ಲ ಶಾಂತಿಭೂಯಿಷ್ಠವಾಗಿದೆ. ಜಪಾನರಾದರೋ ಹಿಂದಿನಿಂದಲೂ ಕದನಪ್ರಿಯರು; ಇಂದಿಗೂ ಕದನಪ್ರಿಯರು. ವೀರನು ತನ್ನ ನಾಯಕನ ಭಕ್ತ; ತನ್ನ ಜೊತೆಗಾರನ ಭಕ್ತ; ಇದೇ ಅವನ ಲಕ್ಷಣ. ಇದೇ ಜಪಾನಿಯ ಲಕ್ಷಣ; ಅವನ ಬಲದ ಮೂಲವೇ ಇದು. "ದೇವತಾಗಣವನ್ನು ಗೌರವಿಸು; ಆ ಕುಲಜರಿಗೆ ಭಕ್ತನಾಗಿರು." ಇದೇ ಷಿಂಟೊ ಧರ್ಮ ಕಲಿಸಿದ ಗುಣ. ಇಂದಿಗೂ ಬೌದ್ಧ ಧರ್ಮದೊಂದಿಗೆ ಷಿಂಟೊ ಧರ್ಮವೂ ಜಪಾನಿನಲ್ಲಿದೆ.

ಇದು ನಿಜವಾಗಿಯೂ ಸದ್ಗುಣವೇ? ಒಂದು ಕಾರಣಕ್ಕೋ, ಒಬ್ಬಗೆಳೆಯನಿಗೋ ಭಕ್ತನಾಗಿರುವುದು ಸುಗುಣವೇ ಸರಿ. ನಮ್ಮ ಮೇಲೆ ಪ್ರಭುತ್ವ ಮಾಡುವ ಒಂದು ಗುಂಪಿನವರ ಲಾಭಕ್ಕಾಗಿ ನಮ್ಮ ರಾಜಭಕ್ತಿಯನ್ನು ಸೂರೆ ಮಾಡಿವೆ ಈ ಷಿಂಟೋ ಮೊದಲಾದ ಮತಗಳು. ಬಹು ಬೇಗ ಅವು ಅಕ್ಕಪಕ್ಕ

ದಲ್ಲಿ ನೆಲೆಸಿಬಿಟ್ಟವು; ಇಂದಿಗೂ ಅವು ಹಾಗೆಯೇ ಇವೆ. ಎರಡರಲ್ಲಿ ಷಿಂಟೋ ಹೆಚ್ಚು ಲೋಕಪ್ರಿಯವೆನಿಸಿದೆ. ಆಳರಸರು ಷಿಂಟೋ ಮತ ಪ್ರೋತ್ಸಾಹಕರು. ಏಕೆಂದರೆ ಆ ಮತವು 'ಆಳರಸರಿಗೆ ವಿಧೇಯರಾಗಿರಬೇಕು, ಭಕ್ತರಾಗಿರಬೇಕು' ಎಂದು ಬೋಧಿಸುತ್ತದೆ ಜನರಿಗೆ. ಬೌದ್ಧಧರ್ಮ ಕೊಂಚ ಭಯಂಕರವಾದುದು; ಆ ಧರ್ಮಸ್ಥಾಪಕನೇ ದೊಂಬಿಕೋರ.

ಜಪಾನಿನ ಕಲಾ ಜೀವನವು ಬೌದ್ಧ ಮತದೊಂದಿಗೆ ಆರಂಭವಾಗುತ್ತದೆ. ಜಪಾನು ಅಥವಾ ಯಮಾತೋ ನೇರವಾಗಿ ಚೀನಾದೊಂದಿಗೆ ಬಾಂಧವ್ಯವನು ಬೆಳೆಸಿಕೊಳ್ಳಲು ಮೊದಲಿಟ್ಟಿತು. ಮಾತೆತ್ತಿದರೆ ಚೀನಾಕ್ಕೆ ರಾಯಭಾರ; ಅದರಲ್ಲೂ ಟಂಗ್ ಪ್ರಭುತ್ವದ ಕಾಲದಲ್ಲಿ ರಾಜಧಾನಿ ಸಿ-ಅನ್-ಫು ಆಸಿಯಾ ಖಂಡದಲ್ಲೆಲ್ಲ ಪ್ರಖ್ಯಾತ ಗಳಿಸಿದ್ದಾಗಲಂತೂ ಜಪಾನ್ ರಾಯಭಾರಗಳಿಗೆ ತುದಿ ಮೊದಲೇ ಇಲ್ಲ. ಜಪಾನರೋ ಅಥವಾ ಯಮಾತೋ ನಿವಾಸಿಗಳೋ ನಾರಾ ಎಂಬ ಹೊಸ ರಾಜಧಾನಿಯನ್ನು ಸ್ಥಾಪಿಸಿದರು; ಅದು ಸಿ-ಅನ್-ಫು ನಗರದ ಪ್ರತಿಚಿತ್ರವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಯೇ ಇಲ್ಲ ಯಾವಾಗಲೂ ಜಪಾನರು ಅನುಕರಣಪಟುಗಳು.

ಜಪಾನಿನ ಚರಿತ್ರೆಯಲ್ಲಿ ಎಲ್ಲಿ ನೋಡಲಿ, ಮಹಾ ಮಹಾ ಮನೆತನಗಳವರು ಅಧಿಕಾರ ಸ್ಥಾನಗಳಿಗಾಗಿ ಕಾದಾಡುವುದು ಕಾಣಬರುತ್ತದೆ. ಹಿಂದಿನ ಕಾಲದಲ್ಲಿ ಇತರ ಕಡೆಗಳಲ್ಲೂ ಇದೇ ಗುಣ, ನಡತೆ ಜನರಲ್ಲಿ ಕಾಣಬರುತ್ತದೆ. ಪ್ರಾಚೀನ ಮನೆತನಗಳಲ್ಲಿ ಹಳೆಯ ಕುಲಾಭಿಮಾನ ಬೇರೂರಿ ಹೋಗಿದೆ. ಮಿಕಾಡೋ ಅವರ ಚಕ್ರವರ್ತಿ. ಅವನ ಬಲದ ಮುಂದೆ ಬಲವೇ ಇಲ್ಲ; ನಿರಂಕುಶಾಧಿಕಾರಿ; ಅರೆ ನರ, ಅರೆ ದೈವ! ಆತ ಸೂರ್ಯನಿಂದ ಇಳಿದು ಬಂದಿದಾನೆ. ಷಿಂಟೋ ಮತ ಮತ್ತು ಪ್ರಾಚೀನರನ್ನು ಪೂಜೆ ಮಾಡುವ ಆಚಾರ ಎರಡೂ ಜಪಾನಿಗಳನ್ನು ಚಕ್ರವರ್ತಿಯ ನಿರಂಕುಶಾಧಿಕಾರಕ್ಕೆ ದಾಸರನ್ನಾಗಿ ಮಾಡಿಬಿಟ್ಟವೆ. ದೇಶದ ಪ್ರಬಲರಿಗೆ ಪರಮ ವಿಧೇಯರನ್ನಾಗಿ ಮಾಡಿಬಿಟ್ಟವೆ. ಜಪಾನಿನಲ್ಲಿ ಎಷ್ಟೋ ಸಂದರ್ಭಗಳಲ್ಲಿ ಚಕ್ರವರ್ತಿ ಸಹ ಅಧಿಕಾರಶೂನ್ಯನಾದ ಸೂತ್ರದ ಬೊಂಬೆ! ಬಲ, ಅಧಿಕಾರವೆಲ್ಲ ಕೆಲವು ಮಹಾ ಸಂಸಾರಗಳ ಕೈಲಿವೆ. ಆ ಸಂಸಾರಿಗಳೇ ಅಥವಾ ಕುಲಸ್ಥರೇ ಚಕ್ರವರ್ತಿಗಳಿಗೆ ಪಟ್ಟ ಕಟ್ಟುವವರು ತಮಗಿಷ್ಟ ಬಂದವರನ್ನು ರಾಜರನ್ನಾಗಿ, ಚಕ್ರವರ್ತಿಗಳನ್ನಾಗಿ ಮಾಡುವರು.

ದೇಶದ ಆಡಳಿತ ಸೂತ್ರಗಳನ್ನು ಧರಿಸಿದ ಜಪಾನೀ ಮಹಾ ಮನೆತನವೆಂದರೆ ಸೋಗಾ ಮನೆತನ. ಈ ಸಂಗತಿ ಚರಿತ್ರೆಯಿಂದ ತಿಳಿದು ಬರುತ್ತದೆ. ಆ ಮನೆತನದವರು ಬೌದ್ಧ ಮತವನ್ನಂಗೀಕರಿಸಿದರಾದಕಾರಣ ಅದು ಪ್ರಭುತ್ವ ಧರ್ಮವೆನಿಸಿತು. ಈ ಮನೆತನದ ಷೋತುಕ ತೈಷಿ ಎಂಬಾತನು

ಜಪಾನಿನ ಇತಿಹಾಸದಲ್ಲಿ ಮಹಾ ಪ್ರಖ್ಯಾತ. ಬಹು ಶ್ರದ್ಧಾಳುವೆನಿಸಿದ ಬೌದ್ಧ ಧರ್ಮಾನುಯಾಯಿ. ಅಪೂರ್ವ ಕಲಾವಿದ. ಈತನ ಭಾವನೆಗಳಿಗೆಲ್ಲ ಚೀನಾದ ಕನ್ಫ್ಯೂಷಿಯಸ್ಸನ ಮಹಾ ಗ್ರಂಥಗಳೇ ಮೂಲ. ಶಕ್ತಿಯ ಅಸ್ತಿಭಾರದ ಮೇಲಲ್ಲ, ಧರ್ಮದ ಅಸ್ತಿಭಾರದ ಮೇಲೆ ಪ್ರಭುತ್ವ ರಚನೆಯನ್ನೆಬ್ಬಿಸಿದ. ಆಗ ಜಪಾನಿನ ತುಂಬ ಕುಲಕೂಟದವರಿದ್ದರು. ಈ ಕುಲಮುಖ್ಯರು ಮಹಾ ಪ್ರಬಲರು; ಸ್ವಲ್ಪ ಹೆಚ್ಚು ಕಡಿಮೆ ಸ್ವತಂತ್ರರೆಂದೇ ಹೇಳಬೇಕು. ಇವರು ಒಬ್ಬರ ಮಾತನ್ನೊಬ್ಬರು ಕೇಳುವವರಲ್ಲ; ಸದಾ ಕಾದಾಡಿ ಕಚ್ಚಾಡುತ್ತಿದ್ದರು. ಯಾವ ಅಧಿಕಾರಕ್ಕೂ ಇವರು ವಿಧೇಯರಲ್ಲ. ಚಕ್ರವರ್ತಿಯು ಕೇವಲ ಮಹಾಶಬ್ದ ಬಿರುದಾಂಕಿತನೇ ಹೊರತು, ನಿಜವಾಗಿಯೂ ಅವನೂ ಒಬ್ಬ ಕುಲಮುಖ್ಯ. ಷೊತುಕು ತೈಷಿಯು ಇದನ್ನೆಲ್ಲ ಕೊನೆಗಾಣಿಸಿ, ಕೇಂದ್ರ ಸರಕಾರವನ್ನು ಬಲಯುತವನ್ನಾಗಿ ಮಾಡಲಾರಂಭಿಸಿದ. ನಾನಾ ಕುಲಮುಖ್ಯರಿದ್ದರಲ್ಲ, ಆ ಶ್ರೀಮಂತರನ್ನೆಲ್ಲ ಚಕ್ರವರ್ತಿಯ ಅಧೀನರನ್ನಾಗಿ ಮಾಡಿದ. ಕ್ರಿಸ್ತಶಕ ಸುಮಾರು ೬೦೦ ರಲ್ಲಾಯಿತು ಈ ಬದಲಾವಣೆ.

ಷೊತುಕು ತೈಷಿಯ ಮರಣಾನಂತರ ಸೋಗಾ ಮನೆತನದವರನ್ನು ಓಡಿಸಿಬಿಟ್ಟರು. ಸ್ವಲ್ಪ ಕಾಲಾನಂತರ ಜಪಾನಿನ ಚರಿತ್ರೆಯಲ್ಲಿ ಪ್ರಖ್ಯಾತನೆನಿಸಿದ ಮತ್ತೊಬ್ಬನು ರಂಗ ಪ್ರವೇಶ ಮಾಡುತ್ತಾನೆ. ಕಾಕಾ ತೊಮಿನೊ ಕಾಮಾತೋರಿ ಎಂಬುದವನ ಹೆಸರು. ಪ್ರಭುತ್ವದಲ್ಲವನು ನಾನಾ ಬದಲಾವಣೆಗಳನ್ನು ಮಾಡಿದ; ಚೀನಾದ ಮಾರ್ಗಗಳನ್ನನೇಕ ಅನುಕರಣ ಮಾಡಿದ. ಅಧಿಕಾರ ಸ್ಥಾನಗಳಿಗೆ ಜನರನ್ನು ನೇಮಿಸಬೇಕಾದರೆ ಚೀನಾದಲ್ಲಿ ಪರೀಕ್ಷೆಗಳನ್ನು ನಡೆಸುತ್ತಿದ್ದರು. ಇದೊಂದು ಚೀನಾದ ವಿಶಿಷ್ಟ ಲಕ್ಷಣ. ಈ ಪದ್ಧತಿಯನ್ನು ಮಾತ್ರ ಅರಸನು ಅನುಕರಿಸಲಿಲ್ಲ. ಈ ಅರಸನು ಸಾಮಾನ್ಯ ಕುಲಮುಖ್ಯ ಮಾತ್ರವಲ್ಲ; ನಿಜವಾದ ಚಕ್ರವರ್ತಿಯೆನಿಸಿದ. ಕೇಂದ್ರ ಸರಕಾರ ಪ್ರಬಲವಾಯಿತು.

ಈ ಕಾಲದಲ್ಲೇ ನಾರಾ ರಾಜಧಾನಿಯಾದುದು ಆದರೆ ಇದು ಬಹುಕಾಲ ರಾಜಧಾನಿಯಾಗಿ ಬಾಳಲಿಲ್ಲ. ಕ್ರಿಸ್ತಶಕ ೭೯೪ರಲ್ಲಿ ಕಿಯೋಟೊ ರಾಜಧಾನಿಯಾಯಿತು. ೧,೧೦೦ ವರ್ಷಗಳ ಕಾಲ ಅದು ರಾಜಧಾನಿಯಾಗಿತ್ತು. ಮನ್ನೆ ಮನ್ನೆ ಟೋಕಿಯೋ ರಾಜಧಾನಿಯಾಯಿತು. ಟೋಕಿಯೋ ಆಧುನಿಕ ಮಹಾನಗರ. ಜಪಾನಿನ ಆತ್ಮಸ್ವರೂಪವನ್ನು ತಿಳಿಸ ಬಲ್ಲದೇನೋ ಕಿಯೊಟೊನೇ; ಸಾವಿರಾರು ವರ್ಷಗಳ ಸವಿನೆನಪನ್ನು ಕೊಡುವ ನಗರವಿದು.

ಕಾಕಾ ತೊಮಿನೊ ಕಮಾತೊರಿಯು ಫ್ಯೂಜಿವಾರ ಮನೆತನದ ಸಂಸ್ಥಾಪಕ. ಈ ಮನೆತನವು ಜಪಾನಿನ ಇತಿಹಾಸದಲ್ಲಿ ಮಹಾಪಾತ್ರ ವಹಿಸಬೇಕಾಗಿತ್ತು. ಈ ಮನೆತನದವರು ೨೦೦ ವರ್ಷಗಳ ಕಾಲ ಅರಸುತನ ಮಾಡಿದರು. ಚಕ್ರ

ವರ್ತಿಗಳನ್ನು ಸೂತ್ರದ ಗೊಂಬೆಗಳನ್ನಾಗಿ ಮಾಡಿದರು. ಅನೇಕ ಸಾರೆ ತಮ್ಮ ಹೆಣ್ಣು ಮಕ್ಕಳನ್ನು ಮದುವೆ ಮಾಡಿಕೊಳ್ಳಿರೆಂದು ಅವರನ್ನು ಒತ್ತಾಯ ಪಡಿಸಿದರು. ಇತರ ಮನೆತನಗಳಲ್ಲಿ ಬಲಯುತರು ಇರುವರೆಂದು ಭಯಗೊಂಡು ಅಂತಹವರನ್ನೆಲ್ಲ ಸನ್ಯಾಸ ತೆಗೆದುಕೊಂಡು ಮಠ ಪ್ರವೇಶಮಾಡಿಕೊಂಡು ಬಲವಂತ ಮಾಡುತ್ತಿದ್ದರು.

ನಾರಾ ರಾಜಧಾನಿಯೆನಿಸಿದ್ದಾಗ ಚೀನಾದ ಚಕ್ರವರ್ತಿಯು ಜಪಾನಿನ ಅರಸನಿಗೊಂದು ಸಂದೇಶ ಕಳಿಸಿದ. "ಸೂರ್ಯೋದಯ ರಾಜ್ಯ ಮಹಾ ಚಕ್ರವರ್ತಿ" — 'ತ್ಯೆ-ನ್ಯಿಹ್-ಪುಂಗ್-ಕೊಕ್' ಎಂದು ಸಂಬೋಧಿಸಿದ. ಜಪಾನರೀ ಬಿರುದನ್ನು ಬಹಳವಾಗಿ ಮೆಚ್ಚಿದರು. ಯಮಾತೋಗಿಂತಲೂ ಈ ಬಿರುದು ಗಂಭೀರವಾಗಿತ್ತು. ಆದಕಾರಣ ಅವರು ತಮ್ಮ ದೇಶವನ್ನು 'ದೈ ನಿಪ್ಪೋನ್'—'ಅರುಣೋದಯ ರಾಜ್ಯ'ವೆಂದು ಕರೆದರು. ಇಂದಿಗೂ ಜಪಾನಿಗಿದೇ ಸ್ವಂತ ಹೆಸರು. 'ನಿಪ್ಪೋನಿ'ನಿಂದ 'ಜಪಾನ್' ಎಂಬ ಹೆಸರು ಬಂದುದು ಬಹಳ ತಮಾಷೆಯಾಗಿದೆ. ಆರುನೂರು ವರ್ಷಗಳ ಅನಂತರ ಮಾರ್ಕೊ ಪೋಲೋ ಎಂಬ ಇಟಲಿಯ ಒಬ್ಬ ದೊಡ್ಡ ಪ್ರಯಾಣಿಕ ಚೀನಾಕ್ಕೆ ಬಂದ. ಅವನು ಜಪಾನಿಗೆ ಹೋಗಲಿಲ್ಲ, ಆದರೆ ಅದನ್ನು ಕುರಿತು ತನ್ನ ಪ್ರವಾಸ ಗ್ರಂಥದಲ್ಲಿ ಬರೆದ. 'ನಿಹ್-ಪುಂಗ್-ಕಾಕ' ಎಂಬ ಹೆಸರನ್ನು ಕೇಳಿದ್ದ. 'ಚಿ ಪಾಂಗೋ' ಎಂದು ಬರೆದುಕೊಂಡ ತನ್ನ ಪುಸ್ತಕದಲ್ಲಿ. ಇದರಿಂದ ಹುಟ್ಟಿತು 'ಜಪಾನ್' ಎಂಬ ಹೆಸರು!

ಇಂಡಿಯ ಅಥವಾ ಹಿಂದೂಸ್ಥಾನ—ನಮ್ಮ ದೇಶಕ್ಕೆ ಆ ಹೆಸರು ಹೇಗೆ ಬಂತೆಂಬುದನ್ನು ನಿನಗೆ ಹೇಳಿದೇನೆಯೆ? ನಿನಗೆ ಗೊತ್ತೆ? ಎರಡು ಹೆಸರೂ ಸಿಂಧು ಅಥವಾ ಇಂಡಸ್ ಎಂಬ ಇಂಡಿಯಾ ನದಿಯಿಂದ ಬಂತು. ಗ್ರೀಕರು 'ಸಿಂಧು'ವಿಂದ 'ಇಂಡೊಸ' ಎಂದು ನಮ್ಮ ದೇಶವನ್ನು ಕರೆದರು; ಇದರಿಂದ ಇಂಡಿಯ ಹುಟ್ಟಿತು, ಹಾಗೆಯೇ ಸಿಂಧುವಿನಿಂದ ಪರ್ಶಿಯನರು ಹಿಂದುವೆಂದು ಕರೆದರು. 'ಹಿಂದು' ಕಡೆಗೆ 'ಹಿಂದುಸ್ಥಾನ'ವಾಯಿತು.

೪೩

# ಹರ್ಷವರ್ಧನನೂ ಹಿಯೆನ್‌ತ್ಸಾಂಗನೂ

ಮೇ ೧೧, ೧೯೩೨

ಮತ್ತೆ ಭರತ ಖಂಡಕ್ಕೆ ಹಿಂತಿರುಗೋಣ. ಹೂಣರನ್ನು ಸೋಲಿಸಿ, ಓಡಿಸಿದ್ದಾಯಿತು; ಆದರೂ ಆ ಮೂಲೆ ಈ ಮೂಲೆಯಲ್ಲಿ ಅನೇಕರು ನೆಲೆಸಿ ಬಿಟ್ಟಿದಾರೆ. ಬಾಲಾದಿತ್ಯನ ಅನಂತರ ಮಹಾ ಗುಪ್ತವಂಶ ಅಸ್ತಂಗತವಾಯಿತು. ಉತ್ತರ ಭಾರತದಲ್ಲಿ ರಾಜ್ಯ ರಾಷ್ಟ್ರಗಳಿಗೆ ಲೆಕ್ಕವೇ ಇಲ್ಲದಂತಾಯಿತು. ದಕ್ಷಿಣದಲ್ಲಿ ಪುಲಕೇಶಿಯು ಚಾಳುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದ.

ಕಾನ್ಪುರಕ್ಕೆ ಸಮೀಪದಲ್ಲೇ ಇದೆ ಕನೂಜು ನಗರ. ಕಾನ್ಪುರವೀಗ ಬಹಳ ದೊಡ್ಡ ನಗರ; ಅದೇನು ಕಾರ್ಖಾನೆಗಳು, ಹೊಗೆಯು ಕಂಬಗಳು; ಊರು ಸುಂದರವಾಗಿಲ್ಲ, ವಕ್ರ. ಕನೂಜು ಅಷ್ಟೇನೂ ದೊಡ್ಡ ಊರಲ್ಲ, ಹಳ್ಳಿ. ಆದರೆ ನಾನು ಬರೆಯುತ್ತಿರುವ ಕಾಲದಲ್ಲಿ ಕನೂಜು ಮಹಾ ರಾಜನಗರಿ. ನಗರದ ತುಂಬ ಕವಿಗಳು, ಕಲಾವಿದರು, ದಾರ್ಶನಿಕರು! ಕಾನ್ಪುರವಿನ್ನೂ ಹುಟ್ಟಿಯೇ ಇರಲಿಲ್ಲ. ನೂರಾರು ವರ್ಷಗಳ ಕಾಲವಿನ್ನೂ ಅದು ಗರ್ಭವಾಸದಲ್ಲೇ ಇರಬೇಕಾಗಿತ್ತು.

ಕನೂಜೆಂಬುದು ಈಗಿನ ಹೆಸರು. ನಿಜವಾಸ ಹೆಸರು 'ಕನ್ಯಾಕುಬ್ಜ'. ಇದಕ್ಕೊಂದು ಕತೆ ಇದೆ. ಪ್ರಾಚೀನ ಕಾಲ; ಒಬ್ಬ ಋಷಿ; ತನಗವಮಾನವಾಯಿತೆಂದು ಊಹಿಸಿದ. ಅರಸನ ನೂರು ಹೆಣ್ಣು ಮಕ್ಕಳಿಗೂ ಶಾಪ ಕೊಟ್ಟ. ಅವರೆಲ್ಲ ಕುಬ್ಜೆಯರಾದರು! ಅವರೆಲ್ಲ ವಾಸಮಾಡುತ್ತಿದ್ದ ಊರಿಗೆ 'ಕನ್ಯಾಕುಬ್ಜ' ವೆಂದು ಹೆಸರಾಯಿತು.

ಕನೂಜ್-ಸಣ್ಣದಾಗಿದೆ ಹೆಸರು; ಹಾಗೇ ಕರೆಯೋಣ. ಹೂಣರು ಕನೂಜಿನ ಅರಸನನ್ನು ಕೊಂದರು. ಅವನ ಪತ್ನಿ ರಾಜ್ಯಶ್ರೀಯನ್ನು ಕೈಸೆರೆ ಹಿಡಿದರು. ರಾಜ್ಯಶ್ರೀ ಸಹೋದರ ರಾಜವರ್ಧನ ಬಂದು, ಹೂಣರೊಂದಿಗೆ

ಯುದ್ಧಮಾಡಿ ಸಹೋದರಿಯನ್ನು ಬಿಡಿಸಲು ಪ್ರಯತ್ನ ಮಾಡಿದ. ಹೂಣ ರನ್ನೇನೋ ಸೋಲಿಸಿದ; ಆದರೆ ವಿಶ್ವಾಸ ಘಾತುಕರು ಯಾರೋ ಅವನನ್ನು ಕೊಂದರು. ರಾಜ್ಯಶ್ರೀ ತಮ್ಮ ಹರ್ಷವರ್ಧನ ಅಕ್ಕನನ್ನು ಹುಡುಕುತ್ತ ಬಂದ. ಪಾಪ ರಾಜ್ಯಶ್ರೀ ಬಂಧನದಿಂದ ತಪ್ಪಿಸಿಕೊಂಡು ಬೆಟ್ಟಗುಡ್ಡಗಳಿಗೆ ಓಡಿದಳು. ಕಡುಕಷ್ಟಪಟ್ಟಳು. ಆ ಕಷ್ಟ ಸಹಿಸಲಾರದೆ ಒಮ್ಮೆ ಪ್ರಾಣಬಿಡಲು ನಿಶ್ಚಯ ಮಾಡಿದಳು. ಇನ್ನೇನು ಆಕೆ 'ಸತಿ' ಯಾಗಬೇಕು, ಹರ್ಷವರ್ಧನ ಬಂದು ಅಕ್ಕನನ್ನುಳಿಸಿದ.

ಅಕ್ಕನನ್ನು ಕಂಡು ಹಿಡಿದು ಆಕೆಯನ್ನು ರಕ್ಷಿಸಿದ ಮೇಲೆ ಹರ್ಷನು ತನ್ನ ಸಹೋದರನನ್ನು ಕೊಂದ. ದ್ರೋಹಿಯನ್ನು ದಂಡಿಸಿದ. ಅವನನ್ನು ದಂಡಿಸಿದುದು ಮಾತ್ರವಲ್ಲ. ಆಸಮುದ್ರಾಂತ ಉತ್ತರ ಭಾರತ ವನ್ನೆಲ್ಲ ದಕ್ಷಿಣದಲ್ಲಿ ವಿಂಧ್ಯದವರೆಗೆ ಗೆದ್ದು ಬಿಟ್ಟ. ವಿಂಧ್ಯದ ಆಚೆ ಚಾಳುಕ್ಯ ಸಾಮ್ರಾಜ್ಯ; ಹರ್ಷ ಅಲ್ಲಿಗೆ ನಿಲ್ಲಬೇಕಾಯಿತು.

ಹರ್ಷವರ್ಧನನು ಕನೂಜನ್ನು ರಾಜಧಾನಿಯನ್ನಾಗಿ ಮಾಡಿದ. ಹರ್ಷನು ಸ್ವಯಂ ಕವಿ; ನಾಟಕ ರಚನಾ ಚತುರ; ತನ್ನ ಸಭೆಯಲ್ಲಿ ಎಷ್ಟೋ ಮಂದಿ ಕವಿ ಕಲಾವಿದರಿಗೆ ಆಶ್ರಯವನ್ನಿತ್ತ. ಕನೂಜಿನ ಕೀರ್ತಿಗೆ ಪಾರವೇ ಇಲ್ಲ. ಹರ್ಷನು ಶ್ರದ್ಧಾಳುವಾದ ಬೌದ್ಧ. ಭಾರತದಲ್ಲಿ ಬೌದ್ಧ ಧರ್ಮವು ಬಹಳ ಕುಗ್ಗುತ್ತ ಬಂದಿತ್ತು. ಬ್ರಾಹ್ಮಣರು ಅದನ್ನು ನುಂಗುತ್ತ ಬಂದರು. ಹರ್ಷನೇ ಭಾರತದ ಕಟ್ಟಕಡೆಯ ಬೌದ್ಧ ಧರ್ಮಾನುಯಾಯಿ ಅರಸ. ಹರ್ಷನ ಕಾಲದಲ್ಲೇ ನಮ್ಮ ಹಳೇ ಮಿತ್ರ ಹಿಯುನ್‌ತ್ಸಾಂಗನು ಭಾರತಕ್ಕೆ ಬಂದದ್ದು. ಅವನು ಬರೆದ ಪ್ರವಾಸ ಗ್ರಂಥದಲ್ಲಿ ಆತನು ಭಾರತಕ್ಕೆ ಬರುವಾಗ ದಾರಿಯಲ್ಲಿ ಕಂಡ ಮಧ್ಯ ಆಸಿಯಾ ದೇಶಗಳನ್ನು ಭಾರತವನ್ನು ಕುರಿತು ಅನೇಕ ವಿಷಯ ಗಳನ್ನು ಬರೆದಿದ್ದಾನೆ. ಬಹಳ ಶ್ರದ್ಧಾಳುವೆನಿಸಿದ ಬೌದ್ಧ ಆತ. ಆತ ಭಾರತಕ್ಕೆ ಬಂದುದು ಬೌದ್ಧ ಧರ್ಮದ ತೀರ್ಥ ಕ್ಷೇತ್ರಗಳನ್ನೆಲ್ಲ ನೋಡಲಿಕ್ಕೆ; ಬೌದ್ಧ ಧರ್ಮ ಗ್ರಂಥಗಳನ್ನು ತೆಗೆದುಕೊಂಡು ಹೋಗಲಿಕ್ಕೆ. ಗೋಬಿ ಮರು ಭೂಮಿ ದಾಟಿ ಬಂದ ಆತ. ದಾರಿಯಲ್ಲಿ ತಾಶ್ಕಂಡ್, ಸಾಮರಖಂಡ್, ಬಾಲ್ಖ, ಖೋಟಿನ್, ಯಾರ್ಕಂದಗಳನ್ನು ಕಂಡ. ಭಾರತದಲ್ಲೆಲ್ಲ ಸಂಚಾರ ಮಾಡಿದ; ಬಹುಶಃ ಸಿಲೋನಿಗೂ ಹೋದ. ಅವನು ರಚಿಸಿದ ಗ್ರಂಥ ಬಹಳ ತಮಾಷೆಯಾಗಿದೆ; ಅದರಲ್ಲಿ ತಾನು ಕಂಡ ದೇಶಗಳಲ್ಲಿ ಸ್ವತಃ ಗ್ರಹಿಸಿದ ನಿಜವಾದ ಅಂಶಗಳೂ, ಭಾರತದ ನಾನಾ ಕಡೆ ಇರುವ ಜನರ ಚಿತ್ರ ವಿಚಿತ್ರ ಶೀಲ ಚಿತ್ರಗಳೂ—ಇಂದಿಗೂ ಅವು ನಿಜವಾಗಿವೆ—ತಾನು ಕೇಳಿದ

ವಕ್ರ ಕತೆಗಳೂ ಬುದ್ಧನ, ಬೋಧಿಸತ್ವನ ಅನೇಕ ಪವಾಡ ಕಥೆಗಳೂ ಇವೆ. ತಾಮ್ರ ಶಾಸನಗಳನ್ನು ಹೊಟ್ಟೆಗೆ ಬಿಗಿದುಕೊಂಡು ತಿರುಗಾಡುತ್ತಿದ್ದ ಮಹಾ ಬೃಹಸ್ಪತಿಯೊಬ್ಬನ ವಿಚಾರವನ್ನಾಗಲೇ ನಿನಗೆ ಹೇಳಿದೇನೆ. ಆ ಚಿತ್ತಾಕರ್ಷಕ ಕಥೆಯೂ ಈ ಪುಸ್ತಕವಲ್ಲಿದೆ.

ಆತ ಭಾರತದಲ್ಲಿ ದೀರ್ಘಕಾಲವಿದ್ದ; ಮುಖ್ಯವಾಗಿ ಪಾಟಲೀ ಪುತ್ರದ ಬಳಿಯ ನಾಲಂದಾ ವಿಶ್ವವಿದ್ಯಾನಿಲಯದಲ್ಲಿ ಬಹಳ ಕಾಲ ಕಳೆದ. ನಾಲಂದಾ ಘಟಿಕಾ ಸ್ಥಾನವೂ ಹೌದು; ಬೌದ್ಧ ವಿಹಾರವೂ ಹೌದು. ಅಲ್ಲಿ ಸುಮಾರು ೧೦,೦೦೦ ವಿದ್ಯಾರ್ಥಿಗಳೂ, ಬೌದ್ಧ ಸನ್ಯಾಸಿಗಳೂ ಇದ್ದರಂತೆ. ಬ್ರಾಹ್ಮಣ ಸಂಸ್ಕೃತಿಗೆ ಕಾಶಿಯು ಮಹಾ ಕ್ಷೇತ್ರ. ಅದಕ್ಕೆ ಪ್ರತಿಸ್ಪರ್ಧಿ ಈ ಬೌದ್ಧ ಸಂಸ್ಕೃತಿ ಕೇಂದ್ರ.

ಹಿಂದಿನ ಕಾಲದಲ್ಲಿ ಭರತಖಂಡಕ್ಕೆ ಇಂದು (ಚಂದ್ರ) ದೇಶವೆಂದು ಹೆಸರಿತ್ತೆಂದು ನಾನೀಗಾಗಲೇ ನಿನಗೆ ಹೇಳಿದೇನೆ! ಹಿಯೆನ್ ತ್ಸಾಂಗನೂ ಈ ಮಾತನ್ನು ಹೇಳುತ್ತಾನೆ; 'ಅಹಾ! ಈ ಹೆಸರು ಈ ದೇಶಕ್ಕೆ ಎಷ್ಟು ಚನ್ನಾಗಿ ಒಪ್ಪುತ್ತದೆ' ಎಂದು ವರ್ಣಿಸುತ್ತಾನೆ. ಚೀನಾ ಭಾಷೆಯಲ್ಲೂ ಬಹುಶ: 'ಇಁ-ತು' ಅಂದರೆ ಚಂದ್ರ. ಕಷ್ಟವಿಲ್ಲದೆ ನೀನು ಚೀನಾದ ಹೆಸರನ್ನಿಟ್ಟುಕೊಳ್ಳಬಹುದು.

ಹಿಯೆನ್ ತ್ಸಾಂಗನು ಕ್ರಿಸ್ತಶಕ ೬೨೯ರಲ್ಲಿ ಭಾರತಕ್ಕೆ ಬಂದ. ಪ್ರವಾಸಕ್ಕೆ ಚೀನಾವನ್ನು ಬಿಟ್ಟಾಗ ಹಿಯೆನ ತ್ಸಾಂಗನಿಗೆ ೨೬ ವಯಸ್ಸು. ಹಳೆಯ ಚೀನಾ ಗ್ರಂಥವೊಂದು ಹಿಯೆನ' ತ್ಸಾಂಗನನ್ನು "ಎತ್ತರವಾಗಿದ್ದ, ರೂಪವಂತ. ಕೋಮಲವಾದ ಮೈ ಬಣ್ಣ, ತೇಜಃಪುಂಜವಾದ ಕಣ್ಣುಗಳು, ಘನ ಗಂಭೀರ ಸ್ವರೂಪ; ಭೂಮಿಯನ್ನು ಸುತ್ತುವರಿದ ಮಹಾ ಸಮುದ್ರದಂತೆ ಗಂಭೀರವಾದ ಮುಖ ಮುದ್ರೆ. ಲಾವಣ್ಯವನ್ನು ತೇಜಸ್ಸನ್ನು ತಲ್ಲುತ್ತಿತ್ತು ಮುಖ. ಜಲಾಶಯ ಮಧ್ಯದಲ್ಲಿ ಏಳುವ ಕಮಲದ ಹೊಳಪು, ಶಾಂತಿ ಇದೆ ಇಲ್ಲಿ" ಎಂದು ವರ್ಣಿಸುತ್ತದೆ.

ಬೌದ್ಧ ಭಿಕ್ಷುವಿನಂತೆ ಪೀತ ವಸ್ತ್ರವನ್ನುಟ್ಟು ಏಕಾಕಿಯಾಗಿ ಇವನು ಮಹಾ ಯಾತ್ರೆಯನ್ನಾರಂಭಿಸಿದನು. ಇದಕ್ಕೆ ಚೀನಾ ಚಕ್ರವರ್ತಿಯು ಅಪ್ಪಣೆಯನ್ನು ಕೊಟ್ಟಿರಲಿಲ್ಲ. ಮಹಾ ಕಷ್ಟವನ್ನು ಸಹಿಸಿ ಗೋಬಿ ಮರು ಭೂಮಿಯನ್ನು ದಾಟಿದನು. ಈ ಮರುಭೂಮಿಯ ಅಂಚಿನಲ್ಲಿದ್ದ ತುರ್ಫಾನ ರಾಜ್ಯವನ್ನು ಮುಟ್ಟಿದನು. ಮರುಭೂಮಿಯ ಆಶ್ಚರ್ಯಕರವಾದ ಓಯಸಿಸ' ಸಂಸ್ಕೃತಿಯ ಮರುಭೂಮಿ ರಾಜ್ಯವಿದು. ಈಗ ಇದೊಂದು ಸ್ಮಶಾನಘಟ್ಟ;

ಪ್ರಾಚೀನವಾಸ್ತು ಶಿಲ್ಪ ಅನ್ವೇಷಣ ನಿಪುಣರಿಲ್ಲಿ ಹಳೆಯ ಸಾಮಗ್ರಿಗಳಿಗಾಗಿ ಅಗೆಯುತ್ತಿರುತ್ತಾರೆ. ಏಳನೆಯ ಶತಮಾನದಲ್ಲಿ ಹಿಯೆನ್‌ತ್ಸಾಂಗನಿಲ್ಲಿ ಪ್ರಯಾಣ ಮಾಡುತ್ತಿದ್ದಾಗ ಇದು ಪೂರ್ಣ ಜೀವನದಿಂದ; ಪ್ರೌಢ ಸಂಸ್ಕೃತಿಯಿಂದ ಬೆಳಗುತ್ತಿತ್ತು. ಭಾರತ, ಚೀನಾ, ಪರ್ಷಿಯ, ಯೂರೋಪಿನ ಚೂರು ಪಾರು ಸಂಸ್ಕೃತಿಗಳ ವಿಚಿತ್ರ ಮಿಶ್ರಸಂಸ್ಕೃತಿ ಇಲ್ಲಿನದು. ಬೌದ್ಧ ಧರ್ಮವು ಉಛ್ರಾಯ ಸ್ಥಿತಿಯಲ್ಲಿತ್ತು. ಸಂಸ್ಕೃತದ ಮೂಲಕ ಭಾರತದ ಪ್ರಭಾವ ಪ್ರಬಲವಾಗಿತ್ತು. ಅದರೂ ಜೀವನ ವಿಧಾನದ ಮೇಲೆ ಚೀನಾ, ಪರ್ಷಿಯಾಗಳ ಮುದ್ರೆ ಬಿದ್ದಿತ್ತು. ಅವರ ಭಾಷೆ ಎಲ್ಲರೂ ನಿರೀಕ್ಷಿಸಿದಂತೆ ಮಂಗೋಲಿಯ ಗುಂಪಿಗೆ ಸೇರಿದುದಲ್ಲ; ಇಂಡೋ ಯೂರೋಪಿಯನ್; ಯೂರೋಪಿನ ಕೆಲ್ಟಿಕ್ ಭಾಷಾ ಗಣವನ್ನು ಹೋಲುತ್ತದೆ. ಇನ್ನೊಂದು ವಿಶೇಷ ಅಲ್ಲಿನ ಪ್ರಾಚೀನ ಶಿಲೆಗಳ ಮೇಲೆ ಯೂರೋಪಿನಲ್ಲಿ ಕಾಣಬರುವಂತಹ ಚಿತ್ರಗಳಿವೆ. ಬುದ್ಧರೇನು, ಬೋಧಿಸತ್ವರೇನು, ದೇವ ದೇವತೆಗಳೇನು ನಯನ ಮನೋಹರವಾದ ಚಿತ್ರಗಳಿವು. ದೇವತಾ ಮೂರ್ತಿಗಳು ಹೆಚ್ಚಾಗಿ ಭಾರತೀಯ ವಸ್ತ್ರಾಲಂಕಾರದಿಂದಲೂ, ಯವನ ವಸ್ತ್ರಾಲಂಕಾರ ಶಿರೋವೇಷ್ಟನಗಳಿಂದಲೂ ಕೂಡಿವೆ. ಫ್ರಾನ್ಸಿನ ಕಲಾ ವಿಮರ್ಶಕ ಮುಸ್ಯುರ್ ಗ್ರೌಸೆ ಎಂಬಾತನು ಈ ಚಿತ್ರಗಳನ್ನು ಕಂಡು

"ಭಾರತೀಯ ಮೃದು ಮಾಧುರ್ಯ, ಯವನ ಪಾಗ್ರ್ರಿ,
ಚೀನಾದ ಲಾವಣ್ಯಗಳ ಸುಖ ಸಂಕಲನ"

ಎಂಬದಾಗಿ ಹೇಳಿದಾನೆ.

ತುರ್ಫಾನ್ ಇನ್ನೂ ಇದೆ; ನಕ್ಷೆಯಲ್ಲಿ ಅದನ್ನು ನೀನು ನೋಡಬಹುದು. ಆದರೆ ಅದೇನು ಇಂದು ಅಷ್ಟು ಪ್ರಮುಖ ಕ್ಷೇತ್ರವಲ್ಲ. ಎಂತಹ ಆಶ್ಚರ್ಯವಿದು? ಬಹಳ ಹಿಂದಿನ ಕಾಲದಲ್ಲಿ, ೭ನೆಯ ಶತಮಾನದಲ್ಲಿ ದೂರ ದೂರ ಕ್ಷೇತ್ರಗಳಿಂದ ಸಂಪದ್ಯುಕ್ತವಾದ ಸಂಸ್ಕೃತಿಗಳ ನದೀ ನದಗಳು ಬಂದಿಲ್ಲಿ ಸೇರುತ್ತಿದ್ದವು. ಈ ಸಂಗಮದಲ್ಲಿ ಸಮರಸ ಸಂಯೋಜನವಾಗುತ್ತಿತ್ತು!

ಹಿಯನ್‌ತ್ಸಾಂಗ್ ಯಾತ್ರಿಕನು ತುರ್ಫಾನಿನಿಂದ ಕುಚಕ್ಕೆ ಹೋದನು. ಆಗ ಅದು ಮಧ್ಯ ಏಸಿಯಾದಲ್ಲಿ ಮಹಾ ಪ್ರಖ್ಯಾತ ಕ್ಷೇತ್ರವೆನಿಸಿತ್ತು. ಮಹಾ ತೇಜಸ್ವಿನಿಂದ ಕೂಡಿದ ನಾಗರಿಕತೆ; ಸಿರಿಸಂಪದಗಳಿಂದ ಕೂಡಿದ ಸಂಸ್ಕೃತಿ! ವಿಖ್ಯಾತ ಗಾಯಕವಾದಕರಿಗೂ, ಭುವನಮೋಹಿನಿಯರೆನಿಸಿದ ಸ್ತ್ರೀಯರಿಗೂ ಇದು ಹೆಸರುವಾಸಿಯೆನಿಸಿತ್ತು. ಇಲ್ಲಿನ ಕಲೆ ಧರ್ಮ ಎಲ್ಲಾ ಭಾರತದಿಂದ ಬಂದುದು. ಇರಾನಿನಿಂದ ಇದರ ಸಂಸ್ಕೃತಿ ಸಿರಿಯುತವೆನಿಸಿತು. ಇದರ ವಾಣಿಜ್ಯ ವಸ್ತು ಭಾಗ್ಯ ಬೆಳೆ

ಯಿತು. ಅದರ ಭಾಷೆಯಾದರೋ ಸಂಸ್ಕೃತ, ಹಳೆ ಪಾರಸಿ, ಲ್ಯಾಟಿನ್ ಮತ್ತು ಕೆಲ್ಟಿಕ್ ಭಾಷೆಗಳ ಬಂಧು. ಮತ್ತೊಂದು ಮನೋಜ್ಞ ಸಂಯೋಜನ !

ಹೀಗೆ ಹಿಯುನ್‌ತ್ಸಾಂಗನು ತುರುಷ್ಕರ ನಾಡುಗಳ ಮೂಲಕ ಪ್ರಯಾಣ ಮಾಡಿದನು. ಅಲ್ಲಿ ಮಹಾ ಖಾನನು ಆಳುತ್ತಿದ್ದ. ಅವನು ಬುದ್ಧ ಧರ್ಮಾನುಯಾಯಿ. ಮಧ್ಯ ಏಶಿಯಾದ ಬಹುಭಾಗಕ್ಕೀತ ಒಡೆಯನೆನಿಸಿದ್ದ. ಸಾವಿರ ವರ್ಷಕ್ಕೆ ಮೊದಲೇ ಸಿಕಂದರನೀ ಪ್ರಾಚೀನ ನಗರಿಯನ್ನು ಹಾದು ಹೋಗಿ ಸವಿನೆನಪುಗಳನ್ನು ಬಿಟ್ಟಿದ್ದನು. ಅದೇ ಸಮರಖಂಡ ! ಕಾಬೂಲ್ ನದಿಯ ಕಣಿವೆ, ಕಾಶ್ಮೀರ, ಬಾಲ್ಖ ಇವೆಲ್ಲ ಅವನ ವಶವಾಗಿದ್ದವು.

ಚೀನಾದಲ್ಲಿ ಟಂಗ್' ಮನೆತನದ ಪ್ರಭುತ್ವ ಕಾಲದ ಆರಂಭ ದಿನಗಳವು. ಆಗ ಚೀನಾದ ರಾಜಧಾನಿಯಾದ ಸಿ–ಆನ್–ಫು ನಗರವು ಕಲೆಯ, ಜ್ಞಾನದ ಸುತೀರ್ಥವೆನಿಸಿತ್ತು. ನಾಗರಿಕತೆಯ ನಾಯಕತ್ವದ ಕೀರ್ತಿಕಿರೀಟ ಚೀನಾದ್ದೇ. ಹಿಯುನ್‌ತ್ಸಾಂಗನು ಮಹಾ ನಾಗರಿಕ ದೇಶದಿಂದ ಬಂದವನೆಂಬುದನ್ನು ಮರೆಯಬೇಡ. ಅವನ ಹೋಲಿಕೆಯ ಮಟ್ಟವು ಅಸಾಧ್ಯ ಉನ್ನತವಾಗಿದ್ದಿರಬೇಕು. ಆದಕಾರಣ ಭಾರತದ ಪರಿಸ್ಥಿತಿ ಕುರಿತು ಅವನು ಹೇಳಿದ್ದೆಲ್ಲ ಮುಖ್ಯ, ಅಮೂಲ್ಯ. ಭಾರತ ನಿವಾಸಿಗಳನ್ನೂ ಆದರ ಆಡಳಿತವನ್ನೂ ಹೊಗಳುತ್ತಾನೆ :

“ ಸಾಮಾನ್ಯ ಜನರ ಮಾತು – ಉದಾಸೀನ ಪ್ರವೃತ್ತಿಯವರಾದರೂ ಪ್ರಾಮಾಣಿಕರು, ಉದಾರ ಚರಿತರು ; ಹಣಕಾಸಿನ ವಿಚಾರದಲ್ಲಿ ಅವರು ನಿಸ್ಪೃಹರು. ನ್ಯಾಯ ವಿಚಾರಣೆಗಳಲ್ಲಾದರೋ ಪರಹಿತನಿರತರು .. ....ನಡತೆಯಲ್ಲಿ ಮೋಸಗಾರರಲ್ಲ, ದ್ರೋಹಿಗಳಲ್ಲ. ಕೊಟ್ಟ ಮಾತಿಗೆ ತಪ್ಪುವವರಲ್ಲ. ಅವರ ಸರಕಾರದ ನಿಯಮಗಳಲ್ಲಿ ಅದ್ಭುತ ಸರಳತೆ, ನೀತಿನುತ್ತತೆ ಇದೆ. ಅವರ ವರ್ತನದಲ್ಲಾದರೋ ವಿಶೇಷ ಗಾಂಭೀರ್ಯವಿದೆ, ಸವಿಯಿದೆ. ಕ್ರೂರ ಕರ್ಮಿಗಳೂ ದೊಂಬಿಗಾರರೂ ಬಹಳ ಕಡಿಮೆ.”

ಎಂಬದಾಗಿ ಹೇಳಿದಾನೆ.

ಅಷ್ಟು ಮಾತ್ರವೇ ಅಲ್ಲ.

“ ಸರಕಾರದ ಆಡಳಿತ ವಿಧಾನವೆಲ್ಲ ಉದಾರ ತತ್ವಗಳ ಮೇಲೆ ನಿರ್ಮಾಣವಾದುದು. ಆಡಳಿತಾಂಗವು ಸರಳವಾದುದು .. .. .. ಜನರಿಂದ ಬಿಟ್ಟಿ ಕೆಲಸ ಮಾಡಿಸುವುದಿಲ್ಲ .. .. ... ಕಂದಾಯ ತೆರಿಗೆಗಳ ಭಾರ ಕಡಿಮೆ. ಸ್ವಂತವಾಗಿ ಜನರೇ ಹೋಗಿ ದುಡಿಯುವುದು ತೀರ ಸ್ವಲ್ಪ. ಪ್ರತಿಯೊಬ್ಬರೂ ತಮ ತಮ್ಮ ವಸ್ತುಗಳನ್ನೂ ಆಸ್ತಿ ಪಾಸ್ತಿಗಳನ್ನೂ ನಿಶ್ಚಿಂತೆಯಿಂದ ಭದ್ರವಾಗಿಟ್ಟುಕೊಳ್ಳುತ್ತಾರೆ. ಜೀವನಕ್ಕಾಗಿ ಎಲ್ಲರೂ ನೆಲವನ್ನುಳುತ್ತಾರೆ. ರಾಜರ ಭೂಮಿಗಳನ್ನು ಸಾಗುವಳಿ ಮಾಡುವವರು ಬೆಳೆದ ಬೆಳೆಯಲ್ಲಿ ಆರನೆಯ ಒಂದಂಶವನ್ನು

ಕಾಣಿಕೆ ರೂಪದಲ್ಲಿ ಸಲ್ಲಿಸುತ್ತಾರೆ. ವರ್ತಕ ವ್ಯಾಪಾರಗಳಲ್ಲಿ ನಿರತರಾಗಿರುವವರು ತಮ್ಮ ಕೆಲಸಗಳನ್ನು ಸುಸೂತ್ರವಾಗಿ ನೆರವೇರಿಸುತ್ತಾರೆ."

ಎಂಬದಾಗಿ ಹೇಳುತ್ತಾನೆ.

ವಿದ್ಯಾದಾನ ವಿತರಣೆಯು ಚೆನ್ನಾಗಿ ವ್ಯವಸ್ಥೆಗೊಳಿಸಲ್ಪಟ್ಟಿತ್ತೆಂದೂ ಚಿಕ್ಕತನದಲ್ಲೇ ವಿದ್ಯಾಭ್ಯಾಸ ಮೊದಲಾಗುತ್ತಿತ್ತೆಂದೂ ಹಿಯನ್‌ತ್ಸಾಂಗನು ಕಂಡ. ಬಾಲಬೋಧೆಯನ್ನು ಕಲಿತ ಮೇಲೆ ಬಾಲಕ ಬಾಲಕಿಯರು ತಮ್ಮ ಏಳನೆಯ ವಯಸ್ಸಿನಲ್ಲಿ ಐದು ಶಾಸ್ತ್ರಗಳನ್ನೂ ಕಲಿಯಲು ಮೊದಲಿಡುತ್ತಿದ್ದರು. 'ಶಾಸ್ತ್ರ'ಗಳೆಂದರೆ ಈಗ ಕೇವಲ ಮತಗ್ರಂಥಗಳೆಂಬ ನಂಬಿಕೆ ಇದೆ. ಆಗಿನ ಕಾಲದಲ್ಲಿ 'ಶಾಸ್ತ್ರ'ವೆಂದರೆ ಜ್ಞಾನ ಸರ್ವಸ್ವ (೧) ವ್ಯಾಕರಣ (೨) ವೃತ್ತಿ ಕಲಾ ವಿಜ್ಞಾನ (೩) ವೈದ್ಯ (೪) ತರ್ಕ (೫) ದರ್ಶನ; ಇವೇ ಐದು ಶಾಸ್ತ್ರಗಳು. ವಿದ್ಯಾಪೀಠಗಳಲ್ಲಿ ಈ ವಿಷಯಗಳ ಅಧ್ಯಯನವಾಗುತ್ತಲಿತ್ತು. ಮೂವತ್ತನೆಯ ವಯಸ್ಸಿನ ವೇಳೆಗೆ ವಿದ್ಯಾಭ್ಯಾಸವೆಲ್ಲ ಮುಗಿಯುತ್ತಿತ್ತು. ಅಷ್ಟು ದೀರ್ಘಕಾಲ ವಿದ್ಯಾರ್ಜನೆ ಮಾಡುತ್ತಿದ್ದವರು ಅನೇಕರಿರಲಿಲ್ಲವೆಂದು ನನಗೆ ಅನಿಸುತ್ತದೆ. ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಾದರೋ, ಪೂರ್ಣ ವ್ಯಾಪಕವಾಗಿತ್ತು. ಏಕೆಂದರೆ ವೈದಿಕರು, ಸನ್ಯಾಸಿಗಳು ಎಲ್ಲರೂ ಗುರುಗಳೆ; ಅವರಿಗೇನೂ ಬರವಿರಲಿಲ್ಲ. ಜ್ಞಾನ ಪಿಪಾಸುಗಳಾದ ಭಾರತೀಯರನ್ನು ಕಂಡು ಹಿಯನ್‌ತ್ಸಾಂಗನು ಚಕಿತನಾಗಿ ಹೋಗಿದಾನೆ. ತನ್ನ ಪುಸ್ತಕದಲ್ಲೆಲ್ಲಾ ಭಾರತೀಯರ ಜ್ಞಾನದಾಹ ಕುರಿತು ಬರೆದಿದಾನೆ.

ಪ್ರಯಾಗದ* ಕುಂಭಮೇಳವನ್ನು ಹಿಯೆನ್‌ತ್ಸಾಂಗನು ವರ್ಣಿಸುತ್ತಾನೆ ಮತ್ತೊಮ್ಮೆ ನೀನು ಈ ಮೇಳ ನೋಡಲು ಹೋದಾಗ ೧೩೦೦ ವರ್ಷಗಳ ಹಿಂದಿನ ಮೇಳ ನೆನಸಿಕೋ, ಅದಕ್ಕೆ ಹಿಯೆನ್‌ತ್ಸಾಂಗನು ಭೇಟಿಕೊಟ್ಟಿದ್ದನೆಂಬುದನ್ನು ನೆನೆಸಿಕೋ. ಆಗಲೇ ವೇದಗಳ ಕಾಲದಿಂದ ನಡೆದು ಬಂದ ಪ್ರಾಚೀನ ಮೇಳವೆನಿಸಿತ್ತಿದು. ಇಂತಹ ಫಲಿತ ಪರಂಪರೆಗೆ ಸೇರಿದ ಪ್ರಾಚೀನತಮ ಚಿತ್ರದೊಂದಿಗೆ ಹೋಲಿಸಿದರೆ ಇಂದಿನ ಅಲಹಾಬಾದ್ ನಗರ ನಿನ್ನೆ ಮೊನ್ನೆಯದಂತೆ ಕಾಣಬರುತ್ತದೆ. ಈ ನಗರವನ್ನು ಕಟ್ಟಿದವ ಅಕ್ಬರ್; ತೀರ ನಾಲ್ಕು ನೂರು ವರ್ಷಗಳಾಗಿಲ್ಲ. ಪ್ರಯಾಗ ಬಹು ಪ್ರಾಚೀನವಾದುದು. ಗಂಗಾ ಯಮುನಾ ಸಂಗಮಸ್ಥಾನ ವರ್ಷೇ ವರ್ಷೇ ಲಕ್ಷಗಟ್ಟಲೆ ಜನರನ್ನು ಸಾವಿರಾರು ವರ್ಷಗಳಿಂದ ಆಕರ್ಷಿಸುತ್ತಲಿದೆಯಲ್ಲ, ಇದು ಮತ್ತೂ ಪ್ರಾಚೀನವಾದುದು.

* ಇಂದಿನ ಅಲಹಾಬಾದಿಗೆ ಹಿಂದೆ ಪ್ರಯಾಗವೆಂದು ಹೆಸರು. ಮೇಳ ಎಂದರೆ ಜಾತ್ರೆ, ಉತ್ಸವ.

ಹರ್ಷನು ಬೌದ್ಧ ಮತೀಯನಾದರೂ ಈ ಅಚ್ಚ ಹಿಂದೂ ಯಾತ್ರೆಗೆ ಹೋಗುತ್ತಿದ್ದನೆಂದು ಹಿಯುನ್‌ತ್ಸಾಂಗನು ಹೇಳುತ್ತಾನೆ. ಹರ್ಷನ ಪರವಾಗಿ ಸಾಮ್ರಾಜ್ಯ ನಿರೂಪವೊಂದು ಹೊರಡುತ್ತಿತ್ತು ಮೇಳದ ಕಾಲ ಎಲ್ಲರೂ 'ಪಂಚ ಭಾರತ'ಕ್ಕೆ ಬರಬೇಕೆಂದೂ, ತನ್ನ ಅತಿಥಿಗಳಾಗಿರಬೇಕೆಂದೂ ಬಡಬಗ್ಗರಿಗೂ ಕಂಗಾಲರಿಗೂ ನಿರೂಪವು ಆಹ್ವಾನ ಕೊಡುತ್ತಿತ್ತು. ಚಕ್ರವರ್ತಿಯಾದರೇನು, ಅವನಿಗೂ ಎದೆಯಿರಬೇಕು ಇಂಥ ಆಹ್ವಾನ ಕೊಡಲಿಕ್ಕೆ. ಅನೇಕರು ಆಹ್ವಾನ ಮನ್ನಿಸಿ ಬರುತ್ತಿದ್ದರೆಂದು ಹೇಳಬೇಕೆ? ಹರ್ಷನ ಅತಿಥಿಗಳಾಗಿ ಬಂದು ಪ್ರತಿ ದಿನವೂ ಒಂದು ಲಕ್ಷ ಮಂದಿ ಊಟ ಮಾಡುತ್ತಿದ್ದರಂತೆ! ಐದು ವರ್ಷಕ್ಕೊಮ್ಮೆ ಈ ಮೇಳದಲ್ಲಿ ಹರ್ಷನು ತನ್ನ ಭಂಡಾರದೊಳಗೆ ಮಿಕ್ಕ ಆಭರಣಗಳು, ಚಿನ್ನ ಚೀನಾಂಬರವೇ ಮೊದಲಾದ ಸಕಲ ವಸ್ತುಗಳನ್ನೂ ಸರ್ವಸ್ವವನ್ನೂ ದಾನ ಮಾಡುತ್ತಿದ್ದ. ತನ್ನ ವಸ್ತ್ರಾಲಂಕಾರ, ಕಿರೀಟವನ್ನು ಸಹ ಕೊಟ್ಟು ತನ್ನ ಸೋದರಿ ರಾಜ್ಯಶ್ರೀ ಕಯ್ಯಿಂದ ಉಟ್ಟ ತೊಟ್ಟ ಸಾಮಾನ್ಯ ಬಟ್ಟೆಬರೆಗಳನ್ನು ತೆಗೆದುಕೊಳ್ಳುತ್ತಿದ್ದ.

ಹರ್ಷನು ಶ್ರದ್ಧಾಳುವಾದ ಬೌದ್ಧ; ಆದಕಾರಣ ಆಹಾರಕ್ಕಾಗಿ ಪ್ರಾಣಿವಧೆ ಮಾಡಲಾಗದೆಂದು ಆಜ್ಞೆ ಮಾಡಿದ. ಬಹುಶಃ ಬ್ರಾಹ್ಮಣರೂ ಸಹ ಬಹಳವಾಗಿ ಈ ಅಜ್ಞೆಯನ್ನು ವಿರೋಧಿಸಲಿಲ್ಲ. ಏಕೆಂದರೆ ಬುದ್ಧನ ಆಗಮನ ಕಾಲದಿಂದ ಬ್ರಾಹ್ಮಣರೂ ಸಹ ಹೆಚ್ಚು ಹೆಚ್ಚಾಗಿ ಶಾಕಾಹಾರಿಗಳಾಗುತ್ತಾ ಬಂದರು.

ಹಿಯುನ್ ತ್ಸಾಂಗನ ಪುಸ್ತಕದಲ್ಲೊಂದು ತಮಾಷೆ ಸಂಗತಿ ಇದೆ; ನಿನಗದು ಹಿತವೆನಿಸಬಹುದು ಕೇಳು: ಭರತಖಂಡದಲ್ಲಿ ಯಾರಿಗಾದರೂ ಏನಾದರೂ ಕಾಯಿಲೆ ಬಂತೆನ್ನು. ಆಗ ಅವರು ಕೂಡಲೆ ಏಳು ದಿನಗಳ ಕಾಲ ಲಂಘನ ಮಾಡುವರು. ಅಲ್ಲಿಗೂ ವಾಸಿಯಾಗದೆ ಹೋದರೆ ಔಷಧ ತೆಗೆದುಕೊಳ್ಳುವರು. ಆದರೆ ಬಹಳ ಮಂದಿ ರೋಗದಿಂದ ಮುಕ್ತರಾಗುತ್ತಿದ್ದರು. ಉಪವಾಸದಿಂದ ಆ ಕಾಲದಲ್ಲಿ ರೋಗರುಜನಾದಿಗಳು ಅಷ್ಟು ಇರಲಿಲ್ಲವೆಂದೂ ವೈದ್ಯರ ಅವಶ್ಯಕತೆಯೂ ಅಷ್ಟಿರಲಿಲ್ಲವೆಂದೂ ಕಾಣಬರುತ್ತದೆ!

ರಾಜರೂ ರಾಣಿಯರೂ ವಿದ್ಯಾವಂತರಿಗೂ ಸಂಸ್ಕೃತರಿಗೂ ವಿಶೇಷ ಆದರ ಗೌರವಗಳನ್ನು ತೋರಿಸುತ್ತಿದ್ದರು. ಆ ಕಾಲದ ಭಾರತದ ವಿಶಿಷ್ಟ ಚಿಹ್ನೆ ಇದು. ಚೀನಾದಲ್ಲೂ ಭಾರತದಲ್ಲೂ ಉದ್ದೇಶ ಪೂರ್ವಕವಾಗಿ—ಇದು ಬಹಳ ಯಶಸ್ವಿಯೆನಿಸಿತ್ತು—ಪಾಂಡಿತ್ಯಕ್ಕೂ ಸಂಸ್ಕೃತಿಗೂ ಗೌರವಸ್ಥಾನ ಕೊಡುತ್ತಿದ್ದರು. ಕ್ರೂರ ಶಕ್ತಿಗಾಗಲಿ ಐಶ್ವರ್ಯಕ್ಕಾಗಲಿ ಅಂತಹ ಸ್ಥಾನವನ್ನು ಕೊಡುತ್ತಿರಲಿಲ್ಲ.